ಬೆಲೆ: ಎರಡು ಆಣೆ

# ಕರ್ಮವೀರ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

KARMAVEER
WEEKLY
HUBLI
*
MAY 27
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ] 卐 ಹುಬ್ಬಳ್ಳಿ ಸೋಮವಾರ ತಾರೀಖು ೨೭ — ೫ — ೧೯೪೬ 卐 [ ಸಂಚಿಕೆ ೮

# ಪ್ರಥಮ ಮಂತ್ರಾಕ್ಷತೆ

ಬರೆದವರು:— ಆಲೂರ ವೆಂಕಟರಾಯರು

ಶ್ರೀ ಬೇಂದ್ರೆಯವರ ೫೦ ನೆ ಹುಟ್ಟುಹಬ್ಬದ ಉತ್ಸವ ಇದೀಗ ಧಾರವಾಡದಲ್ಲಿ ಸಾಹಿತ್ಯೋತ್ಸವ, ನಿಧಿಸಮರ್ಪಣೆಗಳೊಡನೆ ಸಾಂಗವಾಗಿದೆ. ತನ್ನ ಕಾಲಬಳಿ ಇರುವ ನಿಧಿಯನ್ನು ಗುರುತಿಸುವುದರಲ್ಲಿ ಬಹಳ ಹಿಂದಾಗಿರುವ ಕನ್ನಡನಾಡಿನಲ್ಲಿ ಕವಿ ಬೇಂದ್ರೆಯವರಿಗೆ ತಮ್ಮ ಜೀವಮಾನದಲ್ಲಿಯೇ ಈ ಬಗೆಯ ಗೌರವ ಸಂದುದು ಅವರ ಕವಿತಾಶಕ್ತಿಯ ವ್ಯಾಪಕತೆಯ ದ್ಯೋತಕವಾಗಿದೆ. ಬೇಂದ್ರೆಯವರ ಕಾವ್ಯದ ಸಾಮರ್ಥ್ಯದ ಹಿಂದಿರುವುದು ಅವರ ಕಟು ಜೀವನಾನುಭವ. ಅದರ ಹಿನ್ನೆಲೆಯನ್ನು ಅದ್ಯಂತವಾಗಿ ಬಲ್ಲವರೂ ಬೇಂದ್ರೆಯವರ ಶಕ್ತಿಯ ವಾಹನವಾಗಿ ಕೆಲಕಾಲ ಮೆರೆದ "ಜಯಕರ್ನಾಟಕ" ಪತ್ರಿಕೆಯನ್ನು ಅವರಿಗೊಪ್ಪಿಸಿದವರೂ ಗೆಳೆಯರ ಗುಂಪಿನ ಹಿರಿಯರೂ "ಕರ್ಮವೀರ"ದ ಹಿಂದಿನ ಸಂಪಾದಕರೂ ಆದ ಶ್ರೀ ಆಲೂರ ವೆಂಕಟರಾಯರು ಇಲ್ಲಿ ಬೇಂದ್ರೆಯವರ ಜೀವನದ ಹಿನ್ನೆಲೆಯನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಕವಿಶ್ರೇಷ್ಠರಾದ 'ಅಂಬಿಕಾತನಯ ದತ್ತ'ರ ವಿಷಯವಾಗಿ ಅನೇಕ ಕವಿಗಳು, ಸಾಹಿತಿಗಳು, ಗೆಳೆಯರು, ಭಕ್ತರು, ಅನೇಕ ವಿಧವಾಗಿ ಬರೆದೇ ಇರಬಹುದು. ನಾನೇನೂ ಕವಿಯಲ್ಲ; ಸಾಹಿತಿಯಲ್ಲ; ಭಕ್ತನಲ್ಲ; ರಸಿಕನಲ್ಲ; ಕವಿತಾಸ್ವಾದನ ಶಕ್ತಿಯುಳ್ಳವನೂ ಅಲ್ಲ; ಆತನಿಗೆ ಕವಿತಾಸ್ಫೂರ್ತಿಯನ್ನು ಕೊಟ್ಟವನೂ ನಾನಲ್ಲ; ಆತನಿಂದ ಆ ಸ್ಫೂರ್ತಿಯನ್ನು ಪಡೆದವನೂ ನಾನಲ್ಲ; ವಿಮರ್ಶಕನಲ್ಲ; ಟೀಕಾಕಾರನಲ್ಲ. ಆದರೂ ಶ್ರೀಯುತ ಬೇಂದ್ರೆಯವರ ಬಗ್ಗೆ ನಾಲ್ಕು ಮಾತುಗಳನ್ನು ಹೇಳುವುದಕ್ಕೆ ನನಗೆ ಒಂದು ಬಗೆಯ ವಿಶೇಷ ಹಕ್ಕು ಆದೆ. ಕಾಲಿದಾಸನ ನಾಲಿಗೆಯ ಮೇಲೆ ಕಾಳೀದೇವಿಯು ನಾಲ್ಕಕ್ಷರಗಳನ್ನು ಬರೆದ ಕಾಲಕ್ಕೆ ಇದ್ದ ಪೂಜಾರಿಯು ಕೂಡ ಕಾಲಿದಾಸನು ಕವಿಸರ್ವೋತ್ತಮನಾದ ಬಳಿಕ ತನಗೂ ಕಾಲಿದಾಸನಿಗೂ ಅತಿಶಯ ಸ್ನೇಹವಿತ್ತೆಂದು ಹೇಳಿಕೊಳ್ಳುವುದರಲ್ಲಿ ಮುಂದೆ ಅಭಿಮಾನಪಟ್ಟಿರಲಿಕ್ಕಿಲ್ಲವೆ? ಹಾಗೆ ಆದೆ ನಮ್ಮ ಅವರ ಬಾದರಾಯಣ ಸಂಬಂಧ!

ಹೀಗೆ ನಾನು ಹೇಳಿದರೂ ನಿಜವಾಗಿ ನಮ್ಮ ಅವರ ಸಂಬಂಧ ಇಷ್ಟೇನೂ ದ್ವಾಪರ ಸಂಬಂಧವಲ್ಲ. ನಮಗೂ ಅವರಿಗೂ ಇದ್ದ ಸಂಬಂಧವು ಇಹ—ಪರವಾದುದು; ಸ್ನೇಹಪರವಾದುದು, ಪರಮ ಸ್ನೇಹಪರವಾದುದು. ದೈವದ ವಿಲಕ್ಷಣ ಯೋಗಾಯೋಗವು ಏನಿತ್ತೋ ಯಾರಿಗೆ ಗೊತ್ತು! ಆತನ ಜೀವನದಲ್ಲಿಯ ಪ್ರತಿಯೊಂದು ಮಹತ್ವದ ಪ್ರಸಂಗದಲ್ಲಿ ಆತನ ಸಂಬಂಧ ನನ್ನೊಡನೆ ವಿಶೇಷ ರೀತಿಯಿಂದ ಬಂದಿದೆಯೆಂಬುದು ಆಶ್ಚರ್ಯಕರವಾದ ಸಂಗತಿಯಾಗಿದೆ. ಆತನ ಬಾಲ್ಯ, ಆತನ ತಾರುಣ್ಯ ಇವೆಲ್ಲವುಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನನಗೂ ಅವನಿಗೂ ಸಂಪರ್ಕವುಂಟಾಗಿದೆ. ಕವಿವರ್ಯ ದತ್ತನನ್ನು ಬಲ್ಲವರು ಅನೇಕರಿರಬಹುದು. ಆದರೆ ಅಂಬಿಕಾತನಯ ದತ್ತನನ್ನು ಗೊತ್ತುಬಲ್ಲವನು ನಾನೊಬ್ಬನೆ. ಅಂಬಿಕಾತನಯನನ್ನು ಬಲ್ಲವರು ಅನೇಕರು. ಆದರೆ ಜೀವದ ಗೆಳತಿಯಾದ ಅಂಬಕ್ಕನನ್ನು ಬಲ್ಲವನು ನಾನೊಬ್ಬನೇ. ಗರ್ಭಕೂಸು, ಹಸುಗೂಸು, ದತ್ತನನ್ನು ಬಲ್ಲವನು ನಾನೊಬ್ಬನೇ. ಇಷ್ಟೇ ಅಲ್ಲ; ಆತನಿಗೆ ನಾಮ ಮುಹೂರ್ತ, ಅನ್ನ ಮುಹೂರ್ತ, ಅಕ್ಷರ ಮುಹೂರ್ತಗಳನ್ನು ಮಾಡಿಸಿದವನು ನಾನು. ಆತನ ತಾಯಿಯು ಆತನ ತಲೆಯ ಮೇಲೆ ವರದ ಹಸ್ತವನ್ನಿಟ್ಟುದರಿಂದಲೆ ಸರಸತಿಯು ಆತನ "ಜಿವ್ಹಾಗ್ರ ಸುರಂಗ ನರ್ತಕಿ" ಯಾಗಿರಬಹುದು. ಆದರೆ ಆ ಕವಿತ್ವದ ಸೆಲೆಯ ಮೇಲಿನ ಶಿಲೆಯನ್ನು ಹಾರಬಡೆದು ಅದನ್ನು ಹರಿಬಿಟ್ಟವನು ನಾನು. ಅದಕ್ಕೆ "ಕೃಷ್ಣಾ ಕುಮಾರಿ" ಕುಂಡವನ್ನು ಕಟ್ಟಿಕೊಟ್ಟು ರಸಿಕರಿಗೆ ರಸಪಾನ ಮಾಡಲಿಕ್ಕೆ ಅಸ್ಪದ ಮಾಡಿಕೊಟ್ಟವನು ನಾನು. ಮೊದಲು ಮುಗ್ಧನಾದ ಆತನನ್ನು ಎಳೆದು ತಂದು ಸಾರ್ವಜನಿಕರ ಮುಂದೆ ನಿಲ್ಲಿಸಿದವನು ನಾನು. ಹೀಗೆ ನಾನು ಆತನ ಜೀವನಕ್ಕನೆ ಒಂದು ಬಗೆಯ ಮುನ್ನುಡಿ ಬರೆದಂತೆ ಆಗಿದೆ. ಆತನ ಜೀವನಕ್ಕೆ ಸಂಬಂಧಿಸಿದ ನನ್ನ ಕೆಲವು ಸ್ಮೃತಿಗಳನ್ನು ಇಲ್ಲಿ ಕೊಡುವೆನು.

ನಾನು ಮತ್ತು ಆತನ ತಾಯಿ ಅಂಬಕ್ಕ ತೀರ ಚಿಕ್ಕಂದಿನಿಂದ ಜೀವದ ಗೆಳೆಯರು; ಕೂಡಿ ಆಡಿದವರು; ಕೂಡಿ ಊಟ ಮಾಡಿದವರು; ಕೂಡಿ ಬೆಳೆದವರು. ೧೮೯೦ ನೆಯ ಇಸ್ವಿಯಲ್ಲಿ ನಾನು ಧಾರವಾಡಕ್ಕೆ ಇಂಗ್ಲಿಷ ಕಲಿಯಲಿಕ್ಕೆ ಬಂದೆ. ಮೊಖಾಸಿ ಓಣಿಯಲ್ಲಿ (ಈಗ ಅದಕ್ಕೆ ಪೋತನೀಸ ಓಣಿ ಎಂದು ಹೆಸರು) ನನ್ನ ಆಪ್ತಳಾದ ಮೊಖಾಸಿ ಮಥುರಾಬಾಯಿಯ ಮನೆಯಲ್ಲಿ ಇದ್ದೆ. ಆ ಮನೆಯ ಇಮರಿಗೇನೆ ನನ್ನ ಆಪ್ತರಾದ ಗುಡಾರಿಯವರ ಮನೆಯಲ್ಲಿ ಬೇಂದ್ರೆಯವರ ಅಜ್ಜಿ ಗೋದುಬಾಯಿ ಮತ್ತು ಅವರ ತಾಯಿ ಅಂಬಕ್ಕ ಇವರ ವಾಸ. ನಾವಿಬ್ಬರು ಓರಿಗೆಯವರಾದ ಕಾರಣ ಸಹಜವಾಗಿಯೆ ನನ್ನ ಮತ್ತು ಅವಳ ಗೆಳೆತನ ಕೂಡಿತು. ಮುಂದೆ ಒಂದೆರಡು ವರ್ಷಗಳಲ್ಲಿಯೆ ನನಗೆ ಗೋದೂಬಾಯಿಯಲ್ಲಿಯೆ ಊಟ ಮಾಡುವ ಪ್ರಸಂಗ ಬಂದಿತು. ಆಗಿನಿಂದ ನನ್ನ ಮತ್ತು ಅಂಬಕ್ಕನ ಗೆಳೆತನ ಸಹಜವಾಗಿಯೆ ಬೆಳೆಯಿತು. ಅದು ಅವಳು ಸಾಯುವ ವರೆಗೆ ಉಳಿಯಿತು.

ಮುಂದೆ ಅವರಲ್ಲಿ ನಾನು ನಾಲ್ಕೈದು ವರುಷ ಊಟ ಮಾಡುತ್ತಾ ಇದ್ದೆ. ಆ ಕಾಲದಲ್ಲಿಯೆ ಅಲ್ಲಿ ದತ್ತನು ಹುಟ್ಟಿದ್ದು. ಹೀಗೆ ನಾನು ಆತನ ತೊಟ್ಟಿಲು ತೂಗಿ ಹೆಸರಿಡುವಾಗಲೂ ಇದ್ದೆ. ಆತನ ಕಿವಿಯಲ್ಲಿ ಹೆಸರನ್ನಾದರೂ ಊದಿರಬಹುದು ಮಂತ್ರಾಕ್ಷತೆಯನ್ನಂತೂ ಒಗೆದೆ. ಇರಲಿ, ಅಗ ನಾನೂ ಅಂಬಕ್ಕನಂತೆಯೇ ಆತನ ಬಾಲಲೀಲೆಗಳನ್ನು ಕಂಡು ಹಿಗ್ಗಿದವ. ಅವಳಂತೆಯೆ ಲಾಲನೆಗಳಿಲ್ಲೆಂದೂ ಪರಪುಟ್ಟನಾದನೆಂದೂ ಮರುಗಿದವ. ಆತನ ಅನ್ನಮುಹೂರ್ತ ಜಾವಳಗಳಲ್ಲಿ ನನಗೆ ಪ್ರಥಮ ಆಮಂತ್ರಣ. ಮುಂದೆ ನಾನು ಕಾಲೇಜಕ್ಕೆ ಹೋದೆ. ಆದಕಾರಣ ನಡುವಿನ ೬—೭ ವರ್ಷ ನಮ್ಮ ಅವರ ಸಂಪರ್ಕ ತಪ್ಪಿತು. ಆ ಬಳಿಕ ೧೯೦೫ ರಲ್ಲಿ ನಾನು ವಕೀಲಿಗೆ ಬಂದೆ. ಮೆಣಸಿನಕಾಯಿ ಓಣಿಯಲ್ಲಿ ವಕೀಲಿ ಪ್ರಾರಂಭ ಮಾಡಿದೆ. ಕಾರಣ ಪುನಃ ಸಂಪರ್ಕವುಂಟಾಯಿತು. ೧೯೦೬ ರಲ್ಲಿ ವಕೀಲಿ ಬಿಟ್ಟು ರಾಜಕಾರಣದಲ್ಲಿ ಸೇರಿದೆ. ೧೯೦೬ ರಿಂದ ಸ್ವದೇಶೀ ಚಳವಳಿಯಲ್ಲಿ ನಾನು ಮುಖಂಡ! ಆತನು ಇನ್ನೂ ಬಾಲಕ. ಆತನ ಮುಂಜಿಗೆ ಹೋದದ್ದು ಮಾತ್ರ ನೆನಪಿನಲ್ಲಿ ಇಲ್ಲ. ೧೯೦೯—೧೯೧೦ ರಲ್ಲಿ ನಾನು ರಾಷ್ಟ್ರೀಯ ಶಾಲೆಯ ಪ್ರಿನ್ಸಿಪಾಲ. ಆಗ ದತ್ತನು ಕಾಮನಕಟ್ಟಿಯಲ್ಲಿದ್ದ ರಾಷ್ಟ್ರೀಯ ಶಾಲೆಯ ಮುಂದಿನ ಮನೆಯಲ್ಲಿಯೆ ವಾಸವಾಗಿದ್ದ. ಆದರೆ ನಾನು ಆಗ ಉಪನ್ಯಾಸಗಳನ್ನು ಕೊಡುತ್ತ ಊರೂರಿಗೆ ಸ್ವದೇಶಿ ಚಳವಳಿ ಸಲುವಾಗಿ ಅಡ್ಡಾಡುತಿದ್ದೆ. ಅಲ್ಲದೆ ಆತನ ಕಣ್ಣಿಗೆ ನಾನು ಅಗ ಬಹಳ ಎತ್ತರದವ. ಅಲ್ಲದೆ ಹಿರಿಯ. ಅದ್ದರಿಂದ ನನ್ನೊಡನೆ ಆತನ ಸಲುಗೆ ವಿಶೇಷವಾಗಿರಲಿಲ್ಲ. ತಮ್ಮ ನವಕರಿಗೆ ತಿಲಾಂಜಲಿ ಕೊಟ್ಟು ರಾಷ್ಟ್ರೀಯ ಶಾಲೆಯಲ್ಲಿ ಅಧ್ಯಾಪಕರಾಗಿ ಬಂದ ಶ್ರೀರಾಜಪುರೋಹಿತರಿಗೆ ಬೇಂದ್ರೆಯವರಿಗೆ ಸಲಿಗೆ ಕೂಡಿತು. ರಾಷ್ಟ್ರೀಯ ಶಾಲೆಯು ಇದ್ದಾಗ ಬೇಂದ್ರೆಯು ತನ್ನ ಚಿಕ್ಕತನದಲ್ಲಿ ತಾನು ತನ್ನ ಮೊದಲಿನ ಭಾಷಣ ಅಲ್ಲಿ ಮಾಡಿದೆನೆಂದು ಆತನೆ ಬಹಳ ವರ್ಷಗಳ ನಂತರ ನನಗೆ ನೆನಪು ಮಾಡಿಕೊಟ್ಟನು. ಹೀಗೆ ಆತನ ಮೊದಲನೆಯ ಭಾಷಣದ ಮುಹೂರ್ತ ನನ್ನ ರಾಷ್ಟ್ರೀಯ ಶಾಲೆಯಲ್ಲಿ. ಮುಂದೆ ಸ್ವಲ್ಪ ದಿನಗಳಲ್ಲಿ ಆಳರಸರ ದಬ್ಬಾಳಿಕೆಯಿಂದ ಆ ಶಾಲೆಗೆ ಕೀಲಿಬಿತ್ತು. ನಾನು ಅದೇ ಭವ್ಯವಾದ ರಾಷ್ಟ್ರೀಯ ಶಾಲೆಯ ಕಟ್ಟಡದಲ್ಲಿ ವಕೀಲಿಯನ್ನು ಮತ್ತೆ ೧೯೧೧ ರಲ್ಲಿ ಪ್ರಾರಂಭಮಾಡಿದೆ. ಶ್ರೀರಾಜಪುರೋಹಿತರು ೨೪ ಗಂಟೆಯೂ ನನ್ನಲ್ಲಿಯೆ ವಾಸವಾಗಿರುತ್ತಿದ್ದರು. ಅವರು ಬೇಂದ್ರೆಯವರ ಮನೆಯಲ್ಲಿ ಊಟ ಮಾಡುತ್ತಿದ್ದರು. ನಮ್ಮ ಅಟ್ಟದ ಮೇಲೆ ನನ್ನ ದೊಡ್ಡ ಗ್ರಂಥಾಲಯ. ಅಗಿನ ಕಾಲಕ್ಕೆ ವಕೀಲರಿಗೆ ರೊಕ್ಕದ ಸುರಿಮಳೆಯಾದುದರಿಂದ ಬೇಕಾದ ಪುಸ್ತಕಗಳನ್ನು ತರಿಸುತ್ತಿದ್ದೆ. ರಾಜಪುರೋಹಿತರಿಗೆ ಓದುವ ಹುಚ್ಚು; ನನಗೆ ಕೇಳುವ ಹುಚ್ಚು. ಈ ಅವಧಿಯಲ್ಲಿ ಬೇಂದ್ರೆಯವರು ರಾಜಪುರೋಹಿತರ ಸಹಾಯದಿಂದ ತಮ್ಮ ವಾಚನಾಭಿರುಚಿಯನ್ನು ಬೆಳಿಸಿಕೊಂಡಂತೆ ತೋರುತ್ತದೆ.

ವಕೀಲಿಯನ್ನು ಮಾಡಿದರೂ ನನ್ನ ಯಾವತ್ತೂ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ನಡೆದೇ ಇದ್ದವು. ನನ್ನ ವಕೀಲಿ ಪಾಲುಗಾರರಾದ ಮುದವೇಡು ವೆಂಕಟರಾಯರು ಆ ವಿಷಯದಲ್ಲಿ ನನಗೆ ಪೂರ್ಣ ಅವಕಾಶ ಕೊಟ್ಟಿದ್ದರು. ಆದ್ದರಿಂದ ನನ್ನ ಐತಿಹಾಸಿಕ ಅಭ್ಯಾಸವು ಪೂರ್ಣವಾಗಿ 'ಕರ್ನಾಟಕ ಗತವೈಭವ' ಬೆಳಕು ಕಾಣುತಲಿತ್ತು. ನನ್ನಲ್ಲಿಯೂ ಕರ್ನಾಟಕತ್ವದ ಉದಯವಾದುದೂ ಇದೇ ಕಾಲದಲ್ಲಿ! ನನ್ನ ಮನೆಯ ಮುಂದಿನ, ಮನೆಯೆ ಕಡಪಾ ರಾಘವೇಂದ್ರರಾಯನು ವಕೀಲಿ ಪ್ರಾರಂಭಿಸಿದ ಮನೆ. ಆ ಮನೆಯ (ಜಕಾತಿ ಮಧ್ವರಾಯರ) ಅಟ್ಟದ ಮೇಲೂ ಕೂಡ ನನ್ನ ಗ್ರಂಥಾಲಯ ಇಟ್ಟಿದ್ದೆ. ನನ್ನ ಮತ್ತು ಕಡಪಾ ರಾಘವೇಂದ್ರರಾಯರ ವಾದವಿವಾದಗಳು ಬೆಳತನಕ ನಡೆಯುತಿದ್ದವು. ಅವರ ಮನೆಗೆ ಹೊಂದಿದ ಮನೆಯಲ್ಲಿಯೆ ಬೇಂದ್ರೆಯವರ ವಾಸ. ಹೀಗಾಗಿ ಕರ್ನಾಟಕತ್ವದ ನಮ್ಮ ವಿಚಾರಗಳಲ್ಲಿ ಆತನೂ ಪಾಲುಗಾರನಾದನು. ಬೇಂದ್ರೆಯು ಕಾಲೇಜಕ್ಕೆ ಹೋದ. ಕಡಪಾ ರಾಘವೇಂದ್ರರಾಯ ನನ್ನನ್ನು ಕೂಡಿದ. ಕಾಲೇಜಕ್ಕೆ ಹೋದ್ದರಿಂದ ಬೇಂದ್ರೆ ಮತ್ತು ನನ್ನ ಸಹವಾಸ ತಪ್ಪಿತು.

ಮುಂದೆ ಆತನ ನನ್ನ ಸಹವಾಸ ಉಂಟಾದದ್ದು ೧೯೧೬ ರಲ್ಲಿ ಅಕಸ್ಮಿಕವಾಗಿ. ನಾನು "ವಾಗ್ಭೂಷಣ"ದ ಸಂಪಾದಕನಾಗಿದ್ದಾಗ ಪುಣೆಯಿಂದ "ತುತೂರಿ" ಎಂಬ ಅವನ ಕವನ ಮೊದಲಿಗೆ ನನ್ನ ಕಡೆಗೆ ಮುದ್ರಿಸಲಿಕ್ಕೆ ಬಂದಿತು. ಅದನ್ನು ಓದಿ ನನಗೆ ಅತ್ಯಂತ ಆಶ್ಚರ್ಯವಾಯಿತು. ಆತನಲ್ಲಿ ಕವಿತಾಶಕ್ತಿಯಿದ್ದದನ್ನು ನಾನು ಕಂಡಿರಲಿಲ್ಲ. ಕನ್ನಡದ ಬಗ್ಗೆ ಅತನಲ್ಲಿ ಇಷ್ಟು ಕಳಕಳಿಯಿದಿತೆಂಬುದೂ ನನಗೆ ಗೊತ್ತಿರಲಿಲ್ಲ. ಸ್ವಲ್ಪ ದಿನ ದಿನಗಳಲ್ಲಿ "ವಾಗ್ಭೂಷಣ" ನಿಂತು ಹೋದುದರಿಂದ ಆ ಕವನವು ಮುದ್ರಿತವಾಗಲಿಲ್ಲ. ಆದರೆ ಕೆಲವು ದಿನಗಳಲ್ಲಿಯೆ ಬೇಂದ್ರೆ ಗ್ರ್ಯಾಜುಯೇಟಾಗಿ ಇಲ್ಲಿಗೆ ಇರಲಿಕ್ಕೆ ಬಂದ. ಮುಂದೇನು ಮಾಡಬೇಕೆಂಬ ಪ್ರಶ್ನೆ ಅವನಿಗೆ. ನಾನು ಅವರ ಮನೆತನಕ್ಕೆ ಹಿರಿಯ. ನನ್ನನ್ನು ಕೇಳಿದ. "ಮತಾರಾದರೂ ಆಗಿದ್ದರೆ ನಾನು ಅವರಿಗೆ ಸ್ವಾರ್ಥತ್ಯಾಗ ಮಾಡಿ ಸಾರ್ವಜನಿಕ ಜೀವನದಲ್ಲಿ ಧುಮುಕಲು ಹೇಳುತ್ತಿದ್ದೆ. ಆದರೆ ನಿನ್ನ ಪರಿಸ್ಥಿತಿ ನನಗೆ ಗೊತ್ತು. ನಿನಗೆ ಮಾತ್ರ ಸ್ವಾರ್ಥತ್ಯಾಗ ಮಾಡೆಂದು ಹೇಳಲಾರೆ" ಎಂದು ಅಂದೆ. ಅದಕ್ಕೆ ಆತನು ಕೊಟ್ಟ ಉತ್ತರವು– ಮಾರ್ಮಿಕವಾದ ಉತ್ತರವು; ಇನ್ನೂ ನನ್ನ ಕಿವಿಯಲ್ಲಿ ಕೇಳುತ್ತದೆ. ಅದೇನೆಂದರೆ: "ವೆಂಕಟರಾಯರೆ, ನೀವು ಶ್ರೀಮಂತತನವನ್ನು ಸ್ವಲ್ಪಾದರೂ ಅನುಭವಿಸಿದವರು. ಆದರೆ ನಾನು ಬಡತನದಲ್ಲಿ ಬೆಳೆದವ. ಶ್ರೀಮಂತತನವು ಹೇಗಿರುತ್ತದೆಂಬುದನ್ನು ಅರಿಯದವ. ಅಂದ ಬಳಿಕ ನನಗೇಕೆ ಕಷ್ಟವಾಗಬೇಕು?" ಹಾಗಾದರೆ 'ಅಗಲಿ' ಎಂದೆ. ನಿಮ್ಮ ತಾಯಿಯು ನನಗೆ ಏನೆಂದಾಳು, ಎಂದು ಕೇಳಿದೆ. "ತಾಯಿಯ ಚಿಂತೆ ನಿಮಗೆ ಬೇಡ. ನನ್ನ ಕಕ್ಕಂದಿರಿಗೆ ಮಾತ್ರ ನೀವು ಪತ್ರ ಬರೆಯಿರಿ" ಎಂದು ಅಂದ. ಆ ಪ್ರಕಾರ ಪುಣೆಗೆ ಅವರ ಕಕ್ಕಂದಿರಾದ ಖಂಡೇರಾಯರಿಗೆ ಒಂದು ಅತಿ-ವಿಸ್ತಾರವಾದ ಪತ್ರ ಬರೆದು ಅವರ ಪರವಾನಿಗೆ ಬೇಡಿದೆ. ಆತನನ್ನು ನನ್ನ ತಮ್ಮನಂತೆ ನಡಿಸಿಕೊಳ್ಳುತ್ತೇನೆ; ಚಿಂತೆಯಿಲ್ಲದೆ ಪರವಾನಿಗಿ ಕೊಡಿರಿ ಎಂದು ಆಶ್ವಾಸನ ಕೊಟ್ಟೆ. ಅವರಿಂದ ತತ್‌ಕ್ಷಣವೆ ಉತ್ತರ ಬಂದಿತು. "ಪರವಾನಿಗಿ ಕೊಟ್ಟಿರುವೆ ಇಷ್ಟೇ ಅಲ್ಲ; ಆತನು ಹಾಗೆ ಸ್ವಾರ್ಥತ್ಯಾಗ ಮಾಡುತ್ತಾನೆಂಬುದಕ್ಕೆ ನನಗೆ ಅತಿಶಯ ಸಂತೋಷವೇ ಆಗುತ್ತದೆ" ಎಂದು ಬರೆದರು. ಅವರ ಪರಿಚಯ ನನಗಿದ್ದಿಲ್ಲ. ಅವರ ಮೋರೆಯನ್ನು ಸಹ ನಾನು ನೋಡಿರಲಿಲ್ಲ. ಅವರ ಸ್ವಭಾವವೂ ಗೊತ್ತಿರಲಿಲ್ಲ. ಅವರು ಶ್ರೀಮಂತರಾದರೂ ಅತ್ಯಂತ ಉದಾರ ಸ್ವಭಾವದವರೂ ಇರ್ರುವರೆಂದು ಆ ಮೇಲೆ ತಿಳಿಯಿತು. ಬೇಂದ್ರೆ ಮತ್ತು ಅವರ ತಾಯಿ, ತಮ್ಮಂದಿರೆಲ್ಲರನ್ನು ಸಲುಹಿದವರು ಅವರೇ. ನಾನು ಆ ಕಾಲಕ್ಕೆ ವ್ಹಿಕ್ಟೋರಿಯಾ ಹಾಯಸ್ಕೂಲಕ್ಕೆ ಕಾಲೇಜನ್ನು ಜೋಡಿಸುವ ಉದ್ಯೋಗದಲ್ಲಿ ತೊಡಗಿದ್ದೆ. ರಂಗಾಚಾರ್ಯ

—೧೨ನೇ ಪುಟ ನೋಡಿರಿ

# ಕವಿ ಅಂಬಿಕಾತನಯ

[ ಎನ್ಕೆಯವರಿಂದ ]

'ಅಂಬಿಕಾತನಯ' ರೆಂಬ ಕಾವ್ಯ ನಾಮದಿಂದ ಇಂದಿನ ಕನ್ನಡ ಲೋಕಕ್ಕೆ ವಿಖ್ಯಾತರಾದ ದ. ರಾ. ಬೇಂದ್ರೆಯವರು ಪ್ರತಿಭಾಸಂಪನ್ನ ಕವಿಗಳಲ್ಲೊಬ್ಬರು. ಅವರೊಬ್ಬ ಹುಟ್ಟು ಕವಿಗಳು, ರಸಋಷಿಗಳು.

ಅಂಬಿಕಾತನಯರು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆಯಿಂದ ಕನ್ನಡ ನಾಡು ಧನ್ಯವಾಗಿದೆ. ಇದೇ ಮೇ ತಿಂಗಳಿನ ೨೫-೨೬ ಕ್ಕೆ ಧಾರವಾಡದಲ್ಲಿ ಅವರಿಗೆ ನಿಧಿ ಸಮರ್ಪಣೆಯ ಸಮಾರಂಭವು ವಿಜೃಂಭಣೆಯಿಂದ ಅಖಿಲ ಕನ್ನಡ ನಾಡಿನ ಹಬ್ಬವಾಗಿ ನೆರವೇರಿದೆ. ಕನ್ನಡಿಗರು ಈ ವರಕವಿಗೆ ತಮ್ಮ ಋಣವನ್ನು ಮುಟ್ಟಿಸುವುದು ಅವರ ಕರ್ತವ್ಯ. ರಸವುಣಿಸಿ ನಮ್ಮ ತೃಷೆಯನ್ನು ತಣಿಸಿದ ಕವಿಗೆ ನಾವು ಕೊಡುವ ಯಾವ ಪ್ರತಿಫಲವೂ ಕಡಿಮೆಯೆ.

ಅಂಬಿಕಾತನಯರ ಕಾವ್ಯಶಕ್ತಿ ಅಪರೂಪವಾದದ್ದು. ತಮ್ಮದೇ ಆದ ಸತ್ವಯುಕ್ತವಾದ ಹಳ್ಳಿಯ ದಿನಬಳಕೆಯ ಭಾಷೆಯಲ್ಲಿ ತಮ್ಮವೇ ಆದ ರೂಪಕಗಳಿಂದ, ತಮ್ಮವೇ ಆದ ಸಂಸಾರದ ಸಾವುನೋವುಗಳ ಒಲವುನಲಿವುಗಳ ರಮ್ಯ ಚಿತ್ರಗಳಿಂದ ತಮ್ಮದೇ ಅನುಭವದ ಪರಿಪಾಕದಿಂದ ಅಂಬಿಕಾತನಯರು ಕಾವ್ಯ ಸಾಮ್ರಾಜ್ಯದಲ್ಲಿ ತಮ್ಮದೇ ಒಂದು ಪಟ್ಟ ಕಟ್ಟಿಕೊಂಡಿದ್ದಾರೆ.

ಬಾಳುದ್ದ ಬಡತನದ ಕಹಿಯುಂಡು ನಿರಾಸೆಗಳ ಎಸರಿನಲ್ಲಿ ಕುದ್ದು ನೊಂದು ಬೆಂದು ಹೊರ ಬಂದ ಬೇಂದ್ರೆಯವರು ತಾನು ವಿಷನುಂಗಿವರೂ ಜಗತ್ತಿಗೆ ಶಿವಸ್ವರೂಪಿಯೆನಿಸಿದ ಈಶ್ವರನಂತೆ ಆನಂದ ನೀಡಿದ್ದಾರೆ. ಬಾಳಿನ ಝಳ ತಾಗಿದಷ್ಟು ಇವರ ಕಾವ್ಯದ ಕೆಚ್ಚು ಕಾಂತಿಯುಕ್ತವಾಯಿತು. ಅಂತೆಯೆ ಅಂಬಿಕಾತನಯರ ಮಾತುಮಾತೂ ಜ್ಯೋತಿಯಿಂದ ಕೂಡಿದೆ. ಕವನಕವನದಲ್ಲೂ ಅನುಭವ ಸಾಗರದ ಆಳಕ್ಕಿಳಿದು ಶಾಶ್ವತ ತತ್ವಗಳ ಆಣಿಮುತ್ತುಗಳನೆತ್ತಿ ಹಿಡಿದಿದ್ದಾರೆ.

ಬೇಂದ್ರೆಯವರ ಕವನಗಳಂತೆ ನಾಟಕ, ಕತೆ, ಹರಟೆ, ವಿಮರ್ಶೆ, ವಿಡಂಬನೆಗಳಲ್ಲೂ ಪರಿಶ್ರಮ ಮಾಡಿದ್ದಾರೆ. ಅವರ ಹರಟೆ ನಾಟಕಗಳಲ್ಲಿ ಕಂಡ್ಡು ಬರುವ ವಿಡಂಬನೆ ಹಿತಮಿತವಾದ ವಿನೋದದಿಂದ ತುಂಬಿಕೊಂಡಿದೆ. ಅವರ ಗದ್ಯ ಸಾಹಿತ್ಯ ಪಿಂಡ ಪಿಂಡದ ಕಲಮಿಯ ಮಾವು, ಜುಬ್ಬುರದ ಹುಳಿ ಹೀಚು ಮಾವಲ್ಲ. ಅವರ ವಿಮರ್ಶೆಯು ಹದ ಹವನವಾದದ್ದು. ಮಾತಿನಲ್ಲಿ ತೂಕ, ದೃಷ್ಟಿಯಲ್ಲಿ ತಿಕ್ಷ್ಣತೆ ಎದ್ದು ಕಾಣುತ್ತವೆ.

ಬೇಂದ್ರೆಯವರು ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟು ಸುಮಾರು ಇಪ್ಪತ್ತು ವರುಷಗಳಾಗುತ್ತ ಬಂತು. ಇಲ್ಲಿಯವರೆಗೆ ಮುನ್ನೂರಕ್ಕೆ ಮಿಕ್ಕಿ ಕವನಗಳನ್ನೂ ಇಪ್ಪತ್ತಕ್ಕೆ ಕಡಿಮೆಯಿಲ್ಲದ ನಾಟಕಗಳನ್ನೂ ಹತ್ತು ಹದಿನೈದು ಹರಟೆಗಳನ್ನೂ ಮೂವತ್ತು ನಾಲ್ವತ್ತು ವಿಚಾರಪೂರ್ಣ ಪ್ರಬಂಧಗಳನ್ನೂ ನೂರಾರು ಗ್ರಂಥ ವಿಮರ್ಶೆಗಳನ್ನೂ ಬರೆದು ತಮ್ಮ ಅಮೋಘವಾದ ಕಾಣಿಕೆಯನ್ನು ಕನ್ನಡ ಸರಸತಿಗೆ ಅರ್ಪಿಸಿದ್ದಾರೆ.

ಹಾಡು ಕಟ್ಟುವಂತೆ ನಾಡು ಕಟ್ಟುವಲ್ಲಿಯೂ ಬೇಂದ್ರೆಯವರಿಗೆ ಅಚಲವಾದ ಆಸ್ಥೆ. ನಾಡು ಕಟ್ಟುವ ಕೆಲಸಕ್ಕೆ ಮೊದಲ ಹೆಜ್ಜೆಯಾಗಿ ಗೆಳೆಯರನ್ನು ಕೂಡಿಕೊಂಡು ಧಾರವಾಡದಲ್ಲಿ ಕನ್ನಡ ಸಾಹಿತ್ಯ ಗುಡಿಯನ್ನು ಕಟ್ಟಿಸಿದರು. 'ಸಮರ ಸೇವೆ ಜೀವನ' ಎಂಬ ತಮ್ಮ 'ಕಾವ್ಯಸಂದೇಶವನ್ನು ಕಾರ್ಯರೂಪಕ್ಕೆ ತರಲು ಹವಣಿಸಿದರು. 'ಜಯಕರ್ನಾಟಕ'ವ ಬಾವುಟ ಎತ್ತಿ ಹಿಡಿದರು. ರಾಷ್ಟ್ರೀಯ ಶಾಲೆಯನ್ನೂ ನಡೆಸಿದರು. ಅವರ ನೆತ್ತರದೊಡನೆ ಬಿಸಿಯಾಗಿ ಹರಿಯುತ್ತಿದ್ದ ನಾಡಪ್ರೇಮ ಅನೇಕ ಕವನಗಳ ರೂಪವಾಗಿ ಹೊರ ಬಂದು ಜನರನ್ನು ಹುರಿದುಂಬಿಸಿತು.

ಬೇಂದ್ರೆಯವರ ಕೀರ್ತಿಗೆ ಕಳಸವಿಟ್ಟದ್ದು ಅವರ ಕಾವ್ಯಸೃಷ್ಟಿ. ಬೇಂದ್ರೆಯವರು ಯಾವುದೇ ಸಾಹಿತ್ಯ ರೂಪಕ್ಕೆ ಕೈಹಾಕಲಿ ಬೇಂದ್ರೆಯವರು ಕವಿಗಳೇ. ಅಂಬಿಕಾತನಯರ ಜೀವನವೇ ಕಾವ್ಯವಾಗಿದೆ, ಅವರ ಕಾವ್ಯವೇ ಜೀವನವಾಗಿದೆ. ಹುಣ್ಣಿವೆಗೆ ನೊರೆತೆರೆಗಳೊಂದಿಗೆ ಉಕ್ಕೇರಿ ಹೊರ ಚೆಲ್ಲುವ ಸಮುದ್ರದ ಹಾಗೆ ಅಂಬಿಕಾತನಯರ ಕಾವ್ಯಸೃಷ್ಟಿ. ಜೀವನದ ಸುಖ-ವಿಷಮ ಪರಿಸ್ಥಿತಿಗೆ ಇವರ ಹೃದಯ ಉಕ್ಕೇರಿ ಕಾವ್ಯವಾಗಿ ಹೊರ ಸೂಸುತ್ತದೆ. ಆ ಕಾವ್ಯವಾಣಿಯು ಬೆಳ್ಳು ಸಮುದ್ರದ ನೊರೆಯಂತೆ, ಅದರ ಗತಿ ಸಮುದ್ರದ ತೆರೆಯಂತೆ, ಅದರ ಆಳ ಸಮುದ್ರದಂತೆ. ಅವರ ಕಾವ್ಯಶೈಲಿ, ಅವರ ಅಲಂಕಾರಗಳ ಹೊಳಪು ಬಿಸಿಲಿನ ಕಿರಣಗಳಿಗೆ ಹೊಳೆಯುವ ತೆರೆಗಳ ಅಂಚಿನಂತೆ, ಮಿಂಚಿನಂತೆ.

ಬೇಂದ್ರೆಯವರ ಕವಿಯ ಕಣ್ಣು ವಿಶ್ವವಿಶಾಲ. ಎಷ್ಟು ವಿಶಾಲವೊ ಅಷ್ಟೇ ತೀಕ್ಷ್ಣ. ಇವರ ಪ್ರತಿಭೆ ಸೂರ್ಯ-ಚಂದ್ರರ ಕಣ್ಣು ಮಾಡಿಕೊಂಡು ದಿಙ್ಮಂಡಲದಾಚೆ ತನ್ನ ಚುಂಚ-ಚಾಚಿ ಹಕ್ಕಿಯಾಗಿ ಹಾರುತ್ತದೆ; ಭೃಂಗದ ಬೆನ್ನೇರಿ ಕಲ್ಪನಾವಿಲಾಸದ ಶಿಖರಕ್ಕೇರುತ್ತದೆ. ಇವರ ಕವಿಹೃದಯ ಕುರುಡು ಕಾಂಚಾಣದ ದಬ್ಬಾಳಿಕೆ, 'ತುತ್ತಿನ ಚೀಲ'ದ ಮೇಲೆ ಕಾಲನಪ್ಪಳಿಸಿ ನಿಂತ ಧರ್ಮದ ಹೆಸರಿನ ಅಧರ್ಮ, ಬಾಳನ್ನು ಬೇನೆಮಾಡುವ ಮನದನ್ನೆಯ ವಿರಸ, ಕುನ್ನಿ-ಹುಳಗಳೆನಿಸುವ ಮೂವತ್ತು ಮೂರು ಕೋಟಿ ಜೊಳ್ಳು ಜೀವಗಳ ಹೆಣ-ಹೇಡಿತನ ಇವುಗಳಿಗೆ ತಳಮಳಗೊಳ್ಳುತ್ತದೆ.

ಬೇಂದ್ರೆಯವರ ಕವನಗಳಲ್ಲಿ ಪ್ರಕೃತಿವೈಭವ, ಸಮಾಜದ ಅನ್ಯಾಯ, ಭಾರತದ ಅಧದೆಸೆ, ಸಂಸಾರಿಗನ ಅನುತಾಪ, ದಾಂಪತ್ಯದ ಸರಸ-ವಿರಸ ಹೀಗೆ ವಿಶಾಲ ಪ್ರಪಂಚದ ವಿವಿಧ ಬಣ್ಣಗಳು ರಸಗೊಂಡು ಮೂಡಿ ಕಾಮನಬಿಲ್ಲಿನಂತೆ ಸುಂದರವಾಗಿವೆ; ಸೂರ್ಯನ ಬೆಳಕಿನಂತೆ ಸತ್ಯವಾಗಿವೆ.

ಬೇಂದ್ರೆಯವರ ಕಾವ್ಯ ಶೈಲಿ ನಾದಮಯ. 'ಅಂಬಿಕಾತನಯ'ರೆಂದರೆ 'ಗಾರುಡಿ'ಯೆಂದು ವಿಮರ್ಶಕರು ಕರೆದಿದ್ದಾರೆ. ಲೋಕವೇ ಅವರ ಕಾವ್ಯನಾದಕ್ಕೆ ಸೋತು ತಲ್ಲೀನವಾಗುತ್ತದೆ. ಅವರ ಕಾವ್ಯ 'ಮಾತು ಮಾತು ಮಥಿಸಬಂದ ನಾದದ ನವನೀತ' ಸಂತೆಯ ಚಿಂತೆ ಯಾರಿಗೂ ಬಿಟ್ಟಿಲ್ಲ. ಆದರೂ ಹಗಲಿರುಳ ತಾಳಕ್ಕೆ ಹೆಜ್ಜೆ ಹಾಕಿ 'ಕೋಲೆ ನಾದಲೀಲೆ'ಯೇದೂ 'ಕುಣಿಯೋಣ ಬಾ' ಎಂದೂ ನಲ್ಲ ನಲ್ಲೆಯನ್ನು ಕರೆಯುವ ಕವನಗಳು ಮಾತರಿಯದವರನ್ನೂ ಮುಗ್ಧಗೊಳಿಸುತ್ತವೆ. 'ಚಹಾದಜೋಡಿ ಚೂಡಾಧಾಂಗ ನೀನನಗೆಂದಾವಾ' '....ಕಣ್ಣಿನ್ಯಾಗಿನ ಗೊಂಬಿಯ ದಾಂಗ ಎದ್ಯಾಗ ನಟ್ಟಾವಾ' ಎಂಬ 'ಚಿರನುತ್ತೈದೆ'ಯ ಬಾಯಿಂದ ಬರುವ ಉಪಮೇ ಎಷ್ಟು ಯುಕ್ತವೂ ಹೃದ್ಯವೂ ಆಗಿದೆಯೊ 'ಗಾಳಿಗಿಂತ ತೆಳ್ಳಗ ಇತ್ತ' ಬೆಳಕಿಗಿಂತ ಬೆಳ್ಳಗ ಇತ್ತ....' 'ಜಡಿಯಿಂದಿಳಿದ ಗಂಗಿಯ ಹಾಂಗ ಚೆಂಗನೆ ನೆಗೆದಿತ್ತ' ಎಂಬ ಅಧ್ಯಾತ್ಮ ವಿಷಯದ ಉಪಮೆಯೂ ಅಷ್ಟೇ ನಾದಾನಂದವನ್ನು ಹುಟ್ಟಿಸುತ್ತದೆ.

ಬೇಂದ್ರೆಯವರ ಊಹೆ ದಿಗಂತವನ್ನೆ ಮುಟ್ಟಿ, ಚಿಕ್ಕೆ ಚಂದ್ರಾಮರನ್ನೆಲ್ಲಾ ಸುತ್ತಿಕೊಂಡು ಸಮುದ್ರವನ್ನು ಈಸಿ ನೆಲದ ಮೇಲೆ ಸಂಚರಿಸುತ್ತದೆ. ಅವರ ಕಲ್ಪನೆ ರಾಡಿಯ ತಿಳಿಯಮೇಲೆ ತೇಲಾಡುವ ಬಾತು ಗೋಳಿಯಲ್ಲ, ಮುಗಿಲಿಗೇ ಮೊಗವೊಡ್ಡುವ ಚಾತಕ.

ರಸದ ದೃಷ್ಟಿಯಿಂದ ನೋಡಿದರೆ ಬೇಂದ್ರೆಯವರ ಸಾಹಿತ್ಯದಲ್ಲಿ ಎದ್ದು ಕಾಣುವುವು ಮೂರು ರಸಗಳು-ಕರುಣೆ, ಹಾಸ್ಯ, ಶೃಂಗಾರ.

'ಏಕೋರಸಃ ಕರುಣ ಏವ' ಎಂದು ಭವಭೂತಿ ವರ್ಣಿಸಿರುವಂತೆ ಬೇಂದ್ರೆಯವರ ಸಾಹಿತ್ಯದ ಕುಳುಜೆ ಎಲ್ಲ ರಸಗಳಿಗೂ ಆದಿಯಾಗಿದೆ. ಗಂಡು—ಹೆಣ್ಣು 'ಸಂಸಾರಸಮುದ್ರ ತೀರದ ಮಳಲಮೇಲೆ ಗೂಡುಕಟ್ಟಿಗೊಂಡು' ಆಟನಾಡುತ್ತವೆ. ಇವರ ಲೀಲೆಯಲ್ಲಿ ಮುಟ್ಟಿದ ಮಣ್ಣೂ ಚಿನ್ನವಾಗುತ್ತದೆ ಆದರೆ ಎಲ್ಲಿಂದಲೋ ಕಾಲ ಬಂದು ಗೂಡನೊದೆಯುತ್ತಾನೆ;ಬೇಡಬಂದು ಕ್ರೌಂಚಮಿಥುನಗಳನ್ನಗಲಿಸಿದಂತೆ ಈ ಮಾನವ ಮಿಥುನವನ್ನಗಲಿಸುತ್ತಾನೆ ಅವರ ಆಟದ ಕೈಗೊಂಬೆಯಂತಿದ್ದ ಎಳೆಯ ಮಕ್ಕಳನ್ನು ತುತ್ತಿಬಿಡುತ್ತಾನೆ. ಇಂತಹ ಸನ್ನಿವೇಶಗಳು ಬೇಂದ್ರೆಯವರ ಕವನಗಳಲ್ಲಿ ಅನೇಕವಾಗಿವೆ. ಹೆಂಡತಿಯ 'ಹುದುಗಲಾರದ ದುಃಖ'ವನ್ನು ಹುಸಿನಗೆಯ ಪದರಿನೊಳಗಿಂದ ಅರಿತ ಗಂಡ—'ಮುಮತಾಜಳನೆ ಹುಗಿದು ತಾಜಮಹಲನು ಕಟ್ಟಿ ನಿಜ ದುಃಖ ಮರೆಸಬಹುದೆ?' ಎಂದು ಕೇಳುತ್ತಾನೆ. ಮತ್ತೊಂದು ಸಂದರ್ಭದಲ್ಲಿ ನೆಲಕೆ ಹಾಕಿದ ಕೂಸು ಅಲ್ಲಿಯೆ ಇದೆ. ತಾಯಿ ತನ್ನ ಗಂಡನನ್ನು ಹುಚ್ಚುನಗೆಯ ನೋಟದಿಂದ ನೋಡಹೋಗುತ್ತಾಳೆ. 'ನೀ ಹೀಂಗ ನೋಡಬ್ಯಾಡ ನನ್ನ। ನೀ ಹೀಂಗ ನೋಡಿದರ ನನ್ನ ತಿರುಗಿ ನಾ ಹ್ಯಾಂಗ ನೋಡಲೆ ನಿನ್ನ?' ಎಂದು ಹೇಳಿ, 'ನಿನ್ನ ಕಣ್ಣನ್ಯಾಗ ಕಾಲೂರಿ ಮಳೆಯು ನಡನಡಕ ಹುಚ್ಚನಗಿಯಾಕ। ಹನಿ ಒಡೆಯಲಿಕ್ಕ ಬಂದಂಥ ಮೋಡ ತಡೆಧಾಂಗ ಗಾಳಿಯ ನೆವಕ। ಅತ್ತಾರೆ ಅತ್ತುಬಿಡು ಹೊನಲು ಬರಲಿ ನಕ್ಯಾಕ ಮರಸತಿ ದುಃಖ। ಎವೆ ಬಡಿದು ಕೆಡವು ಬಿರುಗಣ್ಣು ಬ್ಯಾಡ ತುಟಿ ಕಚ್ಚಿ ಹಿಡಿಯದಿರು ಬಿಕ್ಕ।' ಎನ್ನುತ್ತ ಸಂತೈಸಹೋಗುತ್ತಾನೆ.

ಬೇಂದ್ರೆಯವರ ಶೃಂಗಾರ ಕವಿಸಮಯದ ಸಂಪ್ರದಾಯ ಶೃಂಗಾರವಲ್ಲ. 'ಒಲುಮೆ ನಮ್ಮ ಬದುಕು' ಎಂದು ಹಕ್ಕಿಯಂತೆ ಉಲಿದಾಡುವ ಬಡವರ ಸಿಂಗಾರ. 'ಬಡವರ ಸಿಂಗಾರ ಬಯಕೆಗೆ ಮೂಲ'ವಾದರೂ ಅತ ಕೊಟ್ಟ ವಸ್ತ್ರಾವಡವಿ ನನಗ ಅವಗ ಗೊತ್ತು। ತೋಳುಗಳಿಗೆ ತೋಳ ಬಂದಿ ಕೆನ್ನೆ ತುಂಬ ಮುತ್ತು।' ಎಂದು ಈ ಅಲೌಕಿಕ ಆಭರಣದಿಂದ ಮೆರೆದಾಡುವದರಿದ್ರಲಕ್ಷ್ಮಿಯ ಶೃಂಗಾರ. ಅವರ ಹಾಸ್ಯ ಇನ್ನೊಬ್ಬರನ್ನು ನೋಯಿಸುವುದಲ್ಲ. "ನಕ್ಕು ನಗಿಸುವ ನಗೆ ಲೇಸು" ಎಂದು ಸರ್ವಜ್ಞ ಹೇಳಿದಂತೆ ಮಿದುವಾದ ಹದವಾದ ನಗೆ ಇವರ ಸೊತ್ತಾಗಿದೆ. ಬೇಂದ್ರೆಯವರ ಹಾಸ್ಯ ಶೃಂಗಾರಗಳ ನಡುವೆ ಕರುಣೆ ಸೇತುವೆಯಂತಿದೆ. "ಪುಟ್ಟ ವಿಧವೆ" ನಗಿಸಿದರೂ ಕನಿಕರದ [illegible] ಹೊತ್ತಿಸುವುದು. 'ಒಲುಮೆ ನಮ್ಮ ಬದುಕು' ಶೃಂಗಾರವೆನಿಸಿದರೂ ಅದರ ಹಿಂದಿನ ಬಡತನದ ಧ್ವನಿ ಕರುಣೆಯನ್ನೆ ಮಿಡಿಯುವುದು.

ಬೇಂದ್ರೆಯವರು ಯಾವಾಗಲೂ ಆಶಾವಾದಿ, ಕಂಗೆಡಿಸುವ ಕಪ್ಪು ಬರಲಿ,ಮಂಜು ಬರಲಿ ಅದಕ್ಕೆ

—೧೬ ನೇ ಪುಟ ನೋಡಿ

## ವಿಧಾಯಕ ಕಾರ್ಯಕರ್ತರ ಸಮ್ಮೇಲನ

ಹೊನ್ನಾವರದಲ್ಲಿ ಇದೇ ತಿಂಗಳ ೩೦ ಹಾಗೂ ೩೧ ನೇ ದಿನಾಂಕಗಳಲ್ಲಿ ಕರ್ನಾಟಕ ವಿಧಾಯಕ ಕಾರ್ಯಕರ್ತರ ಸಮ್ಮೇಲನವು ಜರುಗಲಿದೆ. ರಾಷ್ಟ್ರದ ಪುನರುತ್ಥಾನ ಕಾರ್ಯವು ಒಮ್ಮೆಲೆ ಉದ್ಭೂತವಾದ ವಿಪ್ಲವದಿಂದ್ಯಸಾಧ್ಯವಾಗುವದಿಲ್ಲ. ಅದಕ್ಕೆ ಬಹು ದಿವಸಗಳ ದುಡಿಮೆ ಬೇಕಾಗುತ್ತದೆ. ಬೇಡಾದ ರಾಜ್ಯಪದ್ಧತಿಯನ್ನು ಕಿತ್ತೊಗೆದು ಬೇಕಾದ ರಾಜ್ಯಘಟನೆಯನ್ನು ನಿರ್ಮಿಸಿಕೊಳ್ಳುವ ಕಾರ್ಯವು ವಿಧಾಯಕ ಕಾರ್ಯಗಳಲ್ಲಿ ಅತ್ಯಂತ ಮಹತ್ವದ ಒಂದು ಅಂಗವೆಂದು ಹೇಳಬಹುದು. ಈ ದೃಷ್ಟಿಯಿಂದ ನೋಡಿದಲ್ಲಿ ಅದಕ್ಕೆ ಪೋಷಕವಾಗುವಂತೆ ತಳದಿಂದಲೇ ನಮ್ಮ ರಾಷ್ಟ್ರಜೀವನವನ್ನು ಹೊಸ ಬಗೆಯಲ್ಲಿ ರೂಪಿಸಿಕೊಳ್ಳಬೇಕಾಗುವದೆಂಬ ವಿಷಯವು ಮನವರಿಕೆಯಾಗದಿರದು. ಅಂತೆಯೇ ಮ. ಗಾಂಧಿಯವರು ಪ್ರತ್ಯಕ್ಷ ಪ್ರತೀಕಾರದ ಕಾರ್ಯಕ್ರಮದ ಜೊತೆಯಲ್ಲಿಯೇ ವಿಧಾಯಕ ಕಾರ್ಯಕ್ರಮವನ್ನೂ ಸೇರಿಸಿಕೊಂಡಿರುವರು.

ವಿಧಾಯಕ ಕಾರ್ಯಕ್ರಮವು ಕೇವಲ ಹದಿನೆಂಟಂಶಗಳ ಕಾರ್ಯಕ್ರಮಕ್ಕೆ ಮಾತ್ರ ಪರಿಮಿತವಾಗಿದೆಯೆಂದು ತಿಳಿದುಕೊಳ್ಳಲಾಗದು. ಮಹಾತ್ಮರು ಸೂಚಿಸಿದ ಈ ಅಂಶಗಳು ಕೇವಲ ದಿಗ್ದರ್ಶಕವಾಗಿವೆ. ಕಾರ್ಯಕರ್ತರಿಗೆ ಒಮ್ಮೆ ರಚನಾತ್ಮಕ ದೃಷ್ಟಿಯು ಬಂದರೆ ಜೀವನದಲ್ಲಿ ಎತ್ತ ನೋಡಿದತ್ತ ವಿಧಾಯಕ ಕಾರ್ಯಕ್ರಮದ ವಿಷಯಗಳೇ ಕಣ್ಣಿಗೆ ಬೀಳತೊಡಗುತ್ತವೆ. ಅಂತೆಯೇ ಅದೊಂದು ಬಾಹ್ಯವ್ಯವಹಾರವಾಗಿರದೆ ಬಾಳಿನ ಒಂದು ಬಗೆ; ಒಂದು ನೋಟವೆಂದು ಬಲ್ಲವರು ಹೇಳುತ್ತಿರುವರು. ರಚನಾತ್ಮಕ ಕಾರ್ಯಕ್ರಮದ ಮಹತ್ವ ಈ ರೀತಿ ಬಹಳವಾಗಿದೆ. ಆದರೆ ದುರ್ದೈವದಿಂದ ಕನ್ನಡ ನಾಡಿನಲ್ಲಿ ವಿಧಾಯಕ ಕಾರ್ಯಕ್ರಮ ಸಾಗಬೇಕಾದಷ್ಟು ಉತ್ತಮ ರೀತಿಯಲ್ಲಿ ಸಾಗುತ್ತಿಲ್ಲ. ಪ್ರದರ್ಶಕ ಚಟುವಟಿಕೆಗಳ ಮೋಹವು ಕೆಲಸಗಾರರನ್ನು ಸಹಜವಾಗಿ ಆವರಿಸಿಬಿಡುವದೇ ಈ ಪರಿಸ್ಥಿತಿಗೆ ಕಾರಣ. ವಿಧಾಯಕ ಕಾರ್ಯಕ್ರಮವು ಬಹಳ ದೀರ್ಘಾವಧಿಯ ಕೆಲಸ. ಕಣ್ಣಿಗೆ ಕಾಣುವಂತೆ ಅದರ ಪರಿಣಾಮ ಒಮ್ಮೆಲೇ ಎದ್ದು ಕಾಣುವದಿಲ್ಲ. ಆದರಿಂದ ಕೆಲಸಗಾರನಿಗೆ ಆಡಂಬರದ ಗೌರವ ಪ್ರತಿಷ್ಠೆಗಳು ದೊರೆಯದೆ ಹೋಗುವವು. ಹೀಗಾಗಿ ವಿಧಾಯಕ ಕೆಲಸಗಾರನು ಕೆಲಕಾಲದಲ್ಲಿ ಹತಾಶನಾಗುವನು. ಈ ಬಗೆಯ ನಿರಾಶೆಗೆಡೆಗೊಡದೆ ಎದೆಗುಂದದೆ ಮುಂದರಿಯಬೇಕಾಗುವದು. ಅದಕ್ಕಾಗಿ ಆತನ ಮೈ ಮನಗಳ ಕಟ್ಟು ಗಟ್ಟಿಯಾಗಿರಬೇಕು.

ಹಿಂದುಸ್ತಾನದ ಇಂದಿನ ಸನ್ನಿವೇಶ ಬಹಳ ಆಶಾಪೂರ್ಣವಾಗಿದೆ. ಸ್ವಾತಂತ್ರ್ಯವನ್ನು ಭೋಗಿಸುವ ಸಮಯವು ತೀರ ಸನ್ನಿಹಿತವಾಗಿದೆ. ಸ್ವತಂತ್ರ ಹಿಂದುಸ್ತಾನವು ತನ್ನ ವ್ಯಕ್ತಿತ್ವವನ್ನು ಯಾವ ರೀತಿಯಲ್ಲಿ ಜಗತ್ತಿಗೆ ಮನವರಿಕೆ ಮಾಡಿಕೊಡುವದೆಂಬದನ್ನು ನೋಡಲು ಜಗತ್ತು ತವಕಿಸುತ್ತದೆ. ಇಂತಹ ಸಮಯದಲ್ಲಿ ಸ್ವಾತಂತ್ರ್ಯ ದೇವಿಯ ಉಪಾಸಕರೆಲ್ಲರೂ ಭರತಖಂಡದ ಭವಿಷ್ಯದ್ಭೂಮಿಕೆಯನ್ನು ಕುರಿತು ಆಲೋಚನಾಮಗ್ನರಾಗಬೇಕಾದುದು ಅಗತ್ಯವೇ ಸರಿ. ಕಾಂಗ್ರೆಸ್ಸಿನ ಅನುಯಾಯಿಗಳು ಒಂದು ದೊಡ್ಡ ಹೊಣೆಯನ್ನು ಹೊರಲಿರುವರು. ಇಂದಿನ ವರೆಗೆ ಆಡುತ್ತ ಬಂದ ತತ್ವದ ನುಡಿಗಳು ಒರೆಗಲ್ಲಿಗೆ ಹತ್ತುವ ಪ್ರಸಂಗ ಬಂದಿದೆ. ಆದುದರಿಂದ ವಿಧಾಯಕ ಕಾರ್ಯಕರ್ತರೆಲ್ಲ ಒಂದೆಡೆ ಸೇರಿ ವಿಚಾರವಿನಿಮಯ ಮಾಡಿ ರಾಷ್ಟ್ರರಚನೆಯ ಕಾರ್ಯದಲ್ಲಿ ಮುಂದರಿವುದು ಯೋಗ್ಯ.

## ಪ್ಯಾರಿಸ ಪರಿಷತ್ತು

ಯುದ್ಧವು ಮುಗಿದರೂ ಶಾಂತಿ ದೇವತೆಯ ಅವತಾರದ ಶುಭಚಿಹ್ನಗಳು ತೋರಲೊಲ್ಲವು. ಸಂಯುಕ್ತ ರಾಷ್ಟ್ರ ಸಂಘದ ಅಧ್ವರ್ಯುತ್ರಯ ರಾಷ್ಟ್ರಗಳಲ್ಲಿಯೇ ಪರಸ್ಪರ ವೈಷಮ್ಯ ಅಂತಃಕಲಹ ಬುದ್ಧಿ ಬೆಳೆಯತೊಡಗಿವೆ. ಇನ್ನೊಂದು ಯುದ್ಧದ ಸಿದ್ಧತೆಯೇ ನಡೆದಂತೆ ವಿವಿಧ ರಾಷ್ಟ್ರಗಳು ತಂತಮ್ಮ ಗತ್ತುಗಾರಿಕೆಯನ್ನು ನಡೆಸಿವೆ. ಅಂತರರಾಷ್ಟ್ರೀಯ

# ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

ರಾಜಕಾರಣದ ತೊಡಕುಗಳು ಬಗೆಹರಿಯದಿರುವದರಿಂದ ಯಾವ ಪರಿಷತ್ತುಗಳೂ ಸುಸೂತ್ರವಾಗಿ ಸಾಗಲೊಲ್ಲವು. ರಾಜಕೀಯ ಕಡೆಮಿಣಿಯ ಪ್ರಸಂಗಗಳು ಬರೇ ಭರತಖಂಡದ ರಾಜಕಾರಣಕ್ಕೆ ಮೀಸಲಾಗಿರುವವೆಂದು ಇಂದಿನ ವರೆಗೆ ಅನೇಕರಿಗೆ ಅನಿಸುತ್ತಿತ್ತು. ಆದರೆ ಈಗ ಅದು ಕೇವಲ ಭರತಖಂಡದ ರಾಜಕಾರಣದ ಗುತ್ತಿಗೆಯಲ್ಲೆಂಬ ಮಾತು ಸಾಕಷ್ಟು ಸಿದ್ಧವಾಗಿದೆ.

ಪ್ಯಾರಿಸದಲ್ಲಿ ವಿದೇಶ ಮಂತ್ರಿಗಳ ಪರಿಷತ್ತು ಮುಂಬರುವ ಶಾಂತಿ ಪರಿಷತ್ತಿನ ಮುಹೂರ್ತವನ್ನು ಗೊತ್ತುಪಡಿಸಲು ಸೇರಿದ್ದಿತು. ಹದಿನೈದು ದಿನಗಳ ವರೆಗೆ ತವಡು ಕುಟ್ಟಿ ಈ ಪರಿಷತ್ತು ಜೂನ ೧೫ ಕ್ಕೆ ಮತ್ತೆ ಕೂಡಬೇಕೆಂದು ಗೊತ್ತಾಗಿ ಮುಂದರಿದಿದೆ.

ವಾದಗ್ರಸ್ತ ವಿಷಯಗಳನ್ನು ಎಲ್ಲ ಮಿತ್ರ ರಾಷ್ಟ್ರಗಳ ವಿರಾಟ್ಪರಿಷತ್ತನ್ನು ಸೇರಿಸಿ ತೀರ್ಮಾನಿಸಬೇಕೆಂದು ಅಮೇರಿಕೆಯ ವಿದೇಶ ಮಂತ್ರಿಯಾದ ಜೇಮ್ಸ ಬಾಯರ್ನ್ಸರ ಮತ. ಆದರೆ ಅದಕ್ಕೆ ವಿರುದ್ಧವಾಗಿ ರಶಿಯದ ವಿದೇಶ ಮಂತ್ರಿಯಾದ ಮೊಲೊಟೋವ್ಹರು ಶಾಂತಿ ಪರಿಷತ್ತನ್ನು ನೆರೆಯಿಸುವ ಮುಂಚೆ ಶಾಂತಿ ಒಡಂಬಡಿಕೆಗಳ ಕರಡುಗಳನ್ನು ಪರಸ್ಪರ ನೋಡಿ ಒಪ್ಪಿಕೊಳ್ಳುವದುಚಿತವೆಂದು ಆವೇಶದಿಂದ ಪ್ರತಿಪಾದಿಸುತ್ತಿರುವರು. ಸೋವಿಯೆಟ್ ರಶಿಯಕ್ಕೆ ಹೆಚ್ಚೆಚ್ಚು ಸವಲತ್ತುಗಳನ್ನು ಕೊಟ್ಟ ಹೊರತು ಶಾಂತಿ ಶರ್ತುಗಳ ಒಕ್ಕಣೆಯು ಸಿದ್ಧವಾಗಲಾರದು. ಬ್ರಿಟನ್ ಅಮೇರಿಕೆಗಳು ಇದಕ್ಕೆ ಒಪ್ಪುವದಿಲ್ಲ. ಆದುದರಿಂದ ವಿರಾಟ್ಪರಿಷತ್ತಿನ ತಂತ್ರವನ್ನು ಹೂಡಿ ಅಲ್ಲಿ ದೊರೆವ ತಮ್ಮ ಬಹುಮತದಿಂದ ರಶಿಯವನ್ನು ಮೊಂಡರ ಗುಂಪಿನಲ್ಲಿ ದಬ್ಬಿಬಿಡಬೇಕೆಂದು ಹೊಂಚು ಹಾಕಿವೆ.

ಪ್ಯಾರಿಸ ಪರಿಷತ್ತು ಒಂದೆರಡು ಸಣ್ಣ ಮಾತುಗಳಲ್ಲಿ ಸಾಧಿಸಿದ ಒಡಂಬಡಿಕೆಯೂ ಜಗತ್ತಿನ ಭವಿತವ್ಯದ ದೃಷ್ಟಿಯಿಂದ ಬಹಳ ಆಶಾದಾಯಕವಾಗಿಲ್ಲ. ಆಸ್ಟ್ರಿಯದ ಟೈರೋಲವು ಇಟಲಿಯ ಕಡೆಗೇ ಉಳಿಯಲಿದೆ. ಹಿಟ್ಲರನು ಹಂಗರಿಗೆ ಕೊಟ್ಟಿದ್ದ ಟ್ರಾನ್ಸಿಲ್ವೇನಿಯವು ರುಮಾನಿಯಕ್ಕೆ ಹೋಗತಕ್ಕದ್ದಿದೆ. ಇವೆರಡೂ ಉದಾಹರಣೆಗಳಿಂದ ನ್ಯಾಯಕ್ಕಿಂತ ಪರಸ್ಪರರ ಸ್ವಾರ್ಥಕ್ಕೆ ಹೆಚ್ಚು ಪ್ರಾಧಾನ್ಯ ದೊರೆತಿದೆಯೆಂದು ಸ್ಪಷ್ಟವಾಗುವದು. ಇಟಲಿಯ ವಿಷಯದಲ್ಲಿ ಚತುರಾಷ್ಟ್ರಗಳನುಸರಿಸಿದ ಧೋರಣೆಯು ಒಳ್ಳೇ ವಿಚಿತ್ರವಾಗಿದೆ. ಶತ್ರುರಾಷ್ಟ್ರವಾಗಿದ್ದ ಇಟಲಿಗೆ ಟ್ರಿಯೆಸ್ಟಿಯ ವಿಷಯದಲ್ಲಿ ಬ್ರಿಟನ್ ಅಮೇರಿಕೆಗಳು ಅನುಕೂಲವಾಗಿರುವದು ಮೋಜಿನ ಸಂಗತಿಯಲ್ಲವೆ? ಅದರಂತೆ ಇಟಲಿಯ ನಿಶ್ಶಸ್ತ್ರೀಕರಣದ ಮೇಲ್ವಿಚಾರಣೆಗೆ ಒಂದು ಮಂಡಲವನ್ನು ನಿಯಮಿಸಬೇಕೆಂಬ ಅಮೇರಿಕೆಯ ಸೂಚನೆಯನ್ನು ರಶಿಯವು ಎದುರಿಸಿದ್ದುದೂ ಮನೋರಂಜಕವಾಗಿದೆ. ತ್ರಿಪೋಲಿಯನ್ನು ಇಟಲಿಯ ಧರ್ಮದರ್ಶಿತ್ವಕ್ಕೆ ಒಪ್ಪಿಸಬೇಕೆಂಬ ಅಮೇರಿಕಾ ಫ್ರಾನ್ಸಗಳ ಸೂಚನೆಗೆ ಬ್ರಿಟನ್ನು ಬೆಂಬಲವಿತ್ತುದು ಸ್ವಾರ್ಥಲಾಭದ ಕಪಟ ನಾಟಕವೆಂದೇ ಅನಿಸದಿರದು. ಇಟಲಿಯು ವೈರಿ ರಾಷ್ಟ್ರವಾಗಿದ್ದರೂ ಅದಕ್ಕೆ ಈ ಪ್ರದೇಶವನ್ನು ಕೊಡುವ ಬ್ರಿಟನ್ ಫ್ರಾನ್ಸ ಅಮೇರಿಕೆಗಳ ತಂತ್ರವು ಸಾಮ್ರಾಜ್ಯ ರಕ್ಷಣೆಯ ಕುತಂತ್ರವೇ ಹೊರತು ನ್ಯಾಯ್ಯ ಸಮ್ಮತ ನೀತಿ ತಂತ್ರವಲ್ಲ. ಇದೆಲ್ಲಕ್ಕೂ ಸ್ವಾತಂತ್ರ್ಯದ ಪುರಸ್ಕರ್ತ ರಾಷ್ಟ್ರವೆನಿಸಿದ ರಶಿಯದ ವಿದೇಶ ಮಂತ್ರಿ ಮೊಲೋಟೋವ್ಹರ ಸ್ವಸ್ತಿವಾಚನದ ಆಶೀರ್ವಾದವು ದೊರೆತಿರುವದು ಆಶ್ಚರ್ಯದ ಮಾತು. ಇದೇ ಮುಂಬರುವ ಜಗತ್ತಿನ ರೂಪರೇಷೆಯಾದರೆ ರಾಜಕೀಯ, ನೈತಿಕ ಪ್ರಾಮಾಣಿಕತೆ ಸತ್ಯಸಂಧತೆ ನ್ಯಾಯ ನಿಷ್ಠುರತೆಗಳಿಗೆ ಎಡೆಯಿಲ್ಲವೆಂದು ನಿಚ್ಚಳವಾಗುವದು. ಸಣ್ಣ ರಾಷ್ಟ್ರಗಳು ದೊಡ್ಡ ರಾಷ್ಟ್ರಗಳ ಕೈಗೊಂಬೆಗಳಾಗಿ ಗಂಡಹೆಂಡರ ಜಗಳದಲ್ಲಿ ಕೂಸು ನುಗ್ಗಿನ್ನುವ ದುರವಸ್ಥೆಗಿಳಿಯುವವೆಂದು ತೋರುತ್ತದೆ.

## ಮಂತ್ರಿತ್ರಯರ ಸೂಚನೆಗಳು

ಹಿಂದುಸ್ತಾನದ ರಾಜಕೀಯ ಬಿಕ್ಕಟ್ಟನ್ನು ಬಿಡಿಸಿ ಸ್ವತಂತ್ರ ರಾಜ್ಯಘಟನೆಯನ್ನು ನಿರ್ಮಿಸಿಕೊಳ್ಳಲು ಅಧಿಕಾರವನ್ನು ಕೊಡುವ ಉದ್ದೇಶದಿಂದ ಬಂದ ಮಂತ್ರಿತ್ರಯರು ಎರಡು ತಿಂಗಳುಗಳ ವರೆಗೆ ವಿಚಾರವಿನಿಮಯ, ಚರ್ಚೆ, ಪತ್ರವ್ಯವಹಾರ ಪರಿಷತ್ತುಗಳನ್ನು ನಡೆಸಿ ಕೊನೆಗೆ ಯಾವುದೂ ಬಗೆಹರಿಯದೆ ತಮ್ಮ ಸೂಚನೆಗಳನ್ನೊಳಗೊಂಡ ಒಂದು ಘೋಷಣೆಯನ್ನು ಪ್ರಸಿದ್ಧಿಸಿರುವರು. ಬ್ರಿಟಿಶ ಮುತ್ಸದ್ದಿಗಳ ಸದುದ್ದೇಶದ ಬಗೆಗೆ ಹಿಂದೀಯರಲ್ಲಿದ್ದ ಸಾಶಂಕ ಮನೋವೃತ್ತಿಗೆ ಮಂತ್ರಿತ್ರಯರ ಸೂಚನೆಗಳಿಂದ ಇನ್ನು ಮೇಲೆ ಎಡೆಯಿಲ್ಲದಂತಾಗಿದೆ. ಬ್ರಿಟಿಷ ಸರಕಾರವು ಅಧಿಕಾರ ತ್ಯಾಗ ಮಾಡಲು ಅಂತಃಕರಣಪೂರ್ವಕವಾಗಿ ಸಿದ್ಧವಾಗಿದೆಯೆಂಬುದರ ಪ್ರಮಾಣವನ್ನು ಮಂತ್ರಿತ್ರಯರು ತಮ್ಮ ಘೋಷಣೆಯಿಂದ ಒದಗಿಸಿಕೊಟ್ಟುದು ಯೋಗ್ಯವಾಗಿದೆ. ಸಿಮ್ಲಾ ಪರಿಷತ್ತು ಮುರಿದ ನಂತರ ಬಣಬಣಗಳ ಬಡಿದಾಟ ಬಹಳವಾಗಿದೆಯೆಂದು ಹೇಳಿ ತನ್ನ ಮೇಲಿನ ಹೊಣೆಯನ್ನು ಹಾರಿಸಿಕೊಂಡು ಮಂತ್ರಿತ್ರಯರು ಮರಳಿ ಇಗ್ಲಂಡಕ್ಕೆ ತೆರಳಬಹುದಾಗಿದ್ದಿತು. ಆದರೆ ಈ ಸಲ ಹಾಗೆ ಮಾಡದೆ ಇಲ್ಲಿಯೇ ನಿಂತು ತಮ್ಮ ಸೂಚನೆಗಳನ್ನು ಬಿಚ್ಚುಮನದಿಂದ ಮಂಡಿಸಿದ್ದುದು ಅವರ ಕಳಕಳಿಯ ದ್ಯೋತಕವಾಗಿದೆ.

ಮಂತ್ರಿತ್ರಯರು ಮಾಡಿದ ಸೂಚನೆಗಳು ದೋಷ ರಹಿತವಾಗಿದೆಯೆಂದು ಹೇಳುವಂತಿಲ್ಲ. ಆದರೆ ಭರತಖಂಡದ ಇಂದಿನ ಪರಿಸ್ಥಿತಿಯಲ್ಲಿ ಅವರು ಎಲ್ಲ ವಿಷಯಗಳನ್ನು ಕೂಲಂಕಷವಾಗಿ ವಿಮರ್ಶಿಸಿ ಹಿಂದುಸ್ತಾನವು ಒಕ್ಕೂಟ್ಟಾಗಿರಬೇಕೆಂದು ಗೊತ್ತುಪಡಿಸಿ ಹಿಂದೀರಾಷ್ಟ್ರವು ಏಕ ಹಾಗು ಅವಿಭಾಜ್ಯವೆಂದು ಸಿದ್ಧಮಾಡಿರುವರು. ಮತ್ತು ಜಿನ್ನಾಸಾಹೇಬರು ಬೇಡುತ್ತಿರುವ ಪಾಕಿಸ್ತಾನದ ಅವ್ಯವಹಾರ್ಯತೆಯನ್ನು ಅಂಕಿ ಸಂಖ್ಯೆಗಳಿಂದ ಸಿದ್ಧಮಾಡಿಕೊಟ್ಟು ರಾಷ್ಟ್ರದ ಮೇಲೆ ದೊಡ್ಡ ಉಪಕಾರವನ್ನು ಮಾಡಿರುವರು. ಭೌಗೋಲಿಕ ಐಕ್ಯ, ಆರ್ಥಿಕ ಅಭಿವೃದ್ಧಿ, ಸಂರಕ್ಷಣೆಯ ಸೌಕರ್ಯ, ಆಡಳಿತದ ಅನುಕೂಲತೆಗಳ ದೃಷ್ಟಿಯಿಂದ ಹಿಂದುಸ್ತಾನವನ್ನು ಇಬ್ಭಾಗಿಸುವದು ಅವಿವೇಕತನದ್ದಾಗುವದೆಂದು ಖಂಡತುಂಡಾಗಿ ಒಡನುಡಿದಿರುವದುಚಿತವಾಗಿದೆ. ಅಲ್ಪಸಂಖ್ಯಾಕರ ಸಮಸ್ಯೆಯು ಪಾಕಿಸ್ತಾನ ನಿರ್ಮಾಣದಿಂದ ತೀರುವದಿಲ್ಲೆಂಬ ಅವರ ತೀರ್ಮಾನವೂ ಸ್ವಾಗತಾರ್ಹವಾಗಿದೆ. ಆದರೆ ಮಂತ್ರಿತಯರು ಅಲಸಂಖ್ಯಾಕರ ನ್ಯಾಯ ಹಿತ ಸಂಬಂಧಗಳ ರಕ್ಷಣೆಯಾಗಬೇಕೆಂಬ ತಮ್ಮ ಆತುರತೆಯನ್ನು ಬಹಿರಂಗಗೊಳಿಸದೆ ಬಿಟ್ಟಿಲ್ಲ. ಆದುದರಿಂದ ಅವರು ಪ್ರಾಂತಗಳು ಬಯಸಿದರೆ ವಾಯವ್ಯ ದಿಕ್ಕಿನಲ್ಲಿ ಹಾಗೂ ಈಶಾನ್ಯದಿಕ್ಕಿನಲ್ಲಿ ಗುಂಪು ಕಟ್ಟಿಕೊಳ್ಳಬಹುದೆಂದು ಹೇಳಿರುವರು. ಈ ವಿಷಯದಲ್ಲಿ ಹೆಚ್ಚು ಸ್ಪಷ್ಟೀಕರಣವನ್ನು ಕಾಂಗ್ರೆಸು ಬಯಸುತ್ತಿದೆ. ಸಂಪೂರ್ಣ ಕಾಂಗ್ರೆಸ್ ಪ್ರಾಂತಗಳಾಗಿದ್ದು ಮೊನ್ನಿನ ಚುನಾವಣೆಗಳಲ್ಲಿ ವಿಭಜನೆ, ಜಾತೀಯ ಗುಂಪು ಕೂಟಗಳಿಗೆ ವಿರುದ್ಧ ಮತವಿತ್ತಿರುವ ಗಡಿನಾಡು ಮತ್ತು ಆಸಾಮು ಪ್ರಾಂತಗಳನ್ನು ಪ್ರಾರಂಭದಶೆಯಲ್ಲೇ ಆದರೂ ಕಾಂಗ್ರೆಸ್ ವಿರೋಧಿ ಪ್ರಾಂತಗಳ ಗುಂಪಿನಲ್ಲಿ ಒತ್ತಾಯದಿಂದ ತುರುಕುವ ಸೂಚನೆಗೆ ಮೌ. ಆಜಾದರು ವ್ಯಕ್ತಗೊಳಿಸಿದ ವಿರೋಧ ನ್ಯಾಯವಾಗಿಯೆ ಇದೆ. ಮುಂಬರುವ ರಾಜ್ಯಘಟನೆಯನ್ನು ಗೊತ್ತುಪಡಿಸಲು ಘಟನಾಸಮಿತಿಯನ್ನು ನಿರ್ಮಿಸುವ ರೀತಿಯಾದರೂ ಸ್ಥೂಲ ದೃಷ್ಟಿಯಿಂದ ಅನಾಕ್ಷೇಪಾರ್ಹವಾಗಿದೆ.

ಘೋಷಣೆಯಲ್ಲಡಕವಾದ ಇನ್ನಿತರ ಕೆಲವಂಶಗಳು ಸಂದಿಗ್ಧವಾಗಿವೆ. ಸಂಸ್ಥಾನ ಪ್ರತಿನಿಧಿಗಳು ರಾಜರ ಪ್ರತಿನಿಧಿಗಳೋ ಪ್ರಜಾಪ್ರತಿನಿಧಿಗಳೋ ಎಂಬದು ಸ್ಪಷ್ಟವಾಗಿರುವದಿಲ್ಲ. ಮಂತ್ರಿತ್ರಯರ ಸೂಚನೆಯಪ್ರಕಾರ ಒಕ್ಕೂಟ ಸರಕಾರಕ್ಕೆ ಮೂರೇ ವಿಷಯಗಳ ಆಡಳಿತದ ಅಧಿಕಾರವಿದೆ. ಇದರಿಂದ ಕೇಂದ್ರ ಸರಕಾರವು ಬಹಳ ದುರ್ಬಲ ಸರಕಾರವಾಗುವ ಸಂಭವವಿದೆ. ಸುಂಕ, ನಾಣ್ಯಚಲನ ಮುಂತಾದ ಮಹತ್ವದ ವಿಷಯಗಳ ಅಂಕೆಯೂ ಒಕ್ಕೂಟ ಸರಕಾರಕ್ಕಿರುವದವಶ್ಯವೆಂದು ತೋರುತ್ತದೆ: ಇಲ್ಲದಿದ್ದರೆ ಪ್ರತಿಯೊಂದು ಪ್ರಾಂತವೂ ತನ್ನದೊಂದು ನಾಣ್ಯಚಲನ ಪದ್ಧತಿಯನ್ನಾರಂಭಿಸುವದರಿಂದ ರಾಷ್ಟ್ರದ ಹಣಕಾಸಿನ ವ್ಯವಹಾರದಲ್ಲಿ ಬಹಳ ಅನಾಹುತಗಳಾಗುವ ಅಂಜಿಕೆಯಿದೆ. ಅದರಂತೆ ಸುಂಕದ ಕಟ್ಟಿಯ ಅಧಿಕಾರದ ಅಧೋಗತಿಯೂ ಆಗಬಹುದು. ಇಂತಹ ಕೆಲವು ದೋಷಗಳಿದ್ದರೂ ಸ್ಥೂಲತಃ ಘೋಷಣೆಯು ಸ್ವಾಗತಾರ್ಹವಾಗಿದೆಯೆಂದು ನಮ್ಮ ಮತ. ಮ. ಗಾಂಧಿಯವರು ಹೇಳಿದಂತೆ ಇದೊಂದು ಹಣಕಾಸಿನ ವಚನಪತ್ರವಿದ್ದಂತಿದೆ. ಅದನ್ನು ಒಪ್ಪಿಕೊಂಡು ಮನ್ನಿಸಲು ಸತ್ಯಸಾಕ್ಷಿಯಾಗಿ ಬ್ರಿಟಿಷ ಸರಕಾರವು ಮುಂಬರಿದರೆ ಅದಕ್ಕೆ ಬೆಲೆಯಿದೆಯೆಂಬ ಮಾತು ಸುಳ್ಳಲ್ಲ.

## ಡಾ. ಪಟ್ಟಾಭಿಯವರ ಆಶ್ವಾಸನ

ಮುಂಬರುವ ಘಟನಾ ಸಮಿತಿಯಲ್ಲಿ ಕರ್ನಾಟಕ ಆಂಧ್ರ ಪ್ರಾಂತಗಳ ಪ್ರಾಂತೀಕರಣದ ಪ್ರಶ್ನೆಯು ನಿಶ್ಚಿತವಾಗಿ ಬರುವದೆಂದೂ ಪ್ರಾಂತ ನಿರ್ಮಾಣದ ಪ್ರಶ್ನೆಯು ಖಚಿತವಾಗಿ ಬಗೆಹರಿವುದೆಂದೂ ಡಾ. ಪಟ್ಟಾಭಿಯವರು ಆಶ್ವಾಸನವನ್ನಿತ್ತಿದ್ದಾರೆ. ಡಾ. ಪಟ್ಟಾಭಿಯವರ ಈ ಆಶ್ವಾಸನವು ಕನ್ನಡಿಗರಿಗೆಲ್ಲ ಬಹಳ ಆನಂದದಾಯಕವಾಗಿದೆ. ಆದರೆ ಕನ್ನಡಿಗರು ಇನ್ನು ಮುಂದೆ ಕೂಡಲೆ ಏಕೀಕರಣಕ್ಕೆ ಸಲುವಾಗಿ ವಿಧಾಯಕ ಸೂಚನೆಗಳನ್ನೊಳಗೊಂಡ ಮನವಿ ಮುಂತಾದ ಕೆಲಸಗಳಿಗೆ ಉದ್ಯುಕ್ತರಾಗಬೇಕು. ಅದಕ್ಕಾಗಿ ಕೂಡಲೆ ಒಂದು ವಿರಾಟಪರಿಷತ್ತನ್ನು-ಸಂಸ್ಥಾನೀ ಪ್ರಜೆಗಳನ್ನೊಳಗೊಂಡ ಪರಿಷತ್ತನ್ನು-ಕೂಡಿಸಬೇಕು, ಸೀಮಾ ವಿವಾದಗಳ ಪ್ರಶ್ನೆಯನ್ನು ಈಗಿನಿಂದಲೇ ಅಭ್ಯಸಿಸಿ ಅದಕ್ಕೆ ಅಗತ್ಯವಾದ ಅಂಕಿಸಂಖ್ಯೆಗಳೊಂದಿಗೆ ಅಣಿಯಾಗಬೇಕು. ಕನ್ನಡಿಗರು ತಮ್ಮ ಕನಸು ನನಸಾಗುವ ಕಾಲ ಹತ್ತಿರಕ್ಕೆ ಬಂದಾಗ ನಿರಲಸರಾಗಿ ಮೈಮುರಿದೆದ್ದು ಮುಂಧೋರಣದಿಂದ ಕಾರ್ಯ ಪ್ರವೃತ್ತರಾಗಬೇಕೆಂದು ಸೂಚಿಸುತ್ತೇವೆ.

## ಮಹತ್ವದ ಸೂಚನೆ

ಅಂಚೆ ತಿಕೀಟ ಹಚ್ಚದೆ ನಮ್ಮ ವಾರ ಪತ್ರಿಕೆಗಳನ್ನು ಕಳಿಸುವದಕ್ಕಾಗಿ ನಾವು ಲಾಯಸೆನ್ಸ ಪಡೆದಿರುತ್ತೇವೆ. ನಮ್ಮ ಲಾಯಸೆನ್ಸ ನಂಬರ ೩ ಇದೆ. ಇದನ್ನು ನಮ್ಮ ವಾರಪತ್ರಿಕೆಯ ಮೇಲೆ ಮುದ್ರಿಸುತ್ತೇವೆ. ಈ ಲಾಯಸೆನ್ಸ ಪ್ರಕಾರ ನಾವು ಸೋಮವಾರ ತಾರೀಖು ೩-೬-೪೬ ರಿಂದ ವಾರಪತ್ರಿಕೆಗಳನ್ನು ತಿಕೀಟು ಹಚ್ಚದೆ ಕಳಿಸಲಿಕ್ಕೆ ಪ್ರಾರಂಭಿಸುವೆವು.

ಅಂಚೆ ಅಧಿಕಾರಿಗಳು ಮತ್ತು ನಮ್ಮ ವಾಚಕರು ಇತ್ತ ಗಮನಿಸಬೇಕು. ಅಂಚೆ ತಿಕೀಟು ಇಲ್ಲೆಂದು "ನಾಟ ಪೇಡ" ಎಂದು ಅಂಚೆ ಅಧಿಕಾರಿಗಳು ತಪ್ಪಿ ಭಾವಿಸಿದರೆ ವಾಚಕರು ಈ ವಿಷಯವನ್ನು ಅವರ ಗಮನಕ್ಕೆ ತರಬೇಕು.

ಮ್ಯಾನೇಜರ
ಕರ್ಮವೀರ, ಹುಬ್ಬಳ್ಳಿ.

# ಮಂತ್ರಿತ್ರಯ ಯೋಜನೆಯ ನಂತರ :

## ಪ್ರಮುಖ ಪಕ್ಷಗಳು ಯೋಜನೆ ಒಪ್ಪುವವೆ?— ಜಿನ್ನಾರಿಗೆ 'ವೈಯಕ್ತಿಕ' ವಿಷಾದ!— ಜೂನ ೧೫ಕ್ಕೆ ನಡುಗಾಲ ಸರಕಾರ?

### "ನಾನು ಅಡಿಯಾಳಾಗಿರುವೆ"!

ಬ್ರಿಟಿಶ ರಾಯಭಾರದವರು ಘಟನಾತ್ಮಕ ಬಿಕ್ಕಟ್ಟನ್ನು ಬಗೆಹರಿಸಲು ಉಪಾಯಗಳನ್ನು ಸೂಚಿಸಿದ ಬೆನ್ನಿಗೇ ವಾಯಿಸರಾಯ ವೇವೆಲ್ಲರೂ ಮುಖ್ಯ ಸೇನಾಪತಿ ಆಚಿನಲೆಕ್ಕರೂ ಆಕಾಶವಾಣಿ ಭಾಷಣಗಳನ್ನು ಮಾಡಿಹಿಂದುಸ್ತಾನದ ಸ್ವಾತಂತ್ರ್ಯದ ವಿಷಯದಲ್ಲಿ ತಮಗಿರುವಕಳಕಳಿಯನ್ನು ವ್ಯಕ್ತಗೊಳಿಸಿದರು. ವಾಯಿಸರಾಯರು, ಈ ಸೂಚನೆಗಳನ್ನು ಯಾವ ಪ್ರಮುಖ ಪಕ್ಷವೂ ಅದನ್ನು ಅದರ ಪಾಡಿಗೆ ಬಿಟ್ಟರೆ ಒಪ್ಪಲಾರದೆಂದು ಒಪ್ಪಿದರು. ಆದರೆ ಹಿಂದುಸ್ತಾನದ ಇತಿಹಾಸದ ಈ ಸಂಧಿಕಾಲದಲ್ಲಿ, ಜಾತೀಯ ತಂಟೆಯಿಂದ ಹಿಂದುಸ್ತಾನದ ಐಕ್ಯಕ್ಕೇ ಭಂಗ ಬರುವ ಗಂಡಾಂತರವೊದಗಿರುವಾಗ ಅದನ್ನು ನಿವಾರಿಸಿ ಪ್ರಗತಿಯ ಮಾರ್ಗವನ್ನು ತೆರೆಯಲು ಈ ಸೂಚನೆಗಳು ಮಾತ್ರ ತಳಹದಿಯಾಗಬಲ್ಲವೆಂದು ಅವರ ಅಭಿಪ್ರಾಯವಾಗಿತ್ತು. ನಡುಗಾಲ ಸರಕಾರದ ಬಗ್ಗೆಯೂ ಅವರು ಆಶ್ವಾಸನವೀಯುತ್ತ, ಗವರ್ನರ ಜನರಲ್ಲರನ್ನು ಬಿಟ್ಟರೆ ಉಳಿದ ಎಲ್ಲ ಸ್ಥಾನಗಳಿಗೆ ಹಿಂದೀಯರನ್ನ- ಮತ್ತು ತಮಗೆ ಎಣಿಕೆಯ ಜನರು ಸಿಗಬಹುದಾದರೆ ಯಾರ ವರ್ಚಸ್ಸು ಸಾಮರ್ಥ್ಯ ಕಳಕಳಿಗಳ ವಿಷಯ ಲೇಶವೂ ಶಂಕಿಸಲವಕಾಶವಿಲ್ಲವೊ ಅಂಥ ಹಿಂದೀಯರನ್ನೇ-ನೇಮಿಸಿಕೊಳ್ಳುವುದಾಗಿ ಹೇಳಿದರವರು. ಆದುದರಿಂದ, ಕೆಲವು ತತ್ವಗಳನ್ನು ಬಿಟ್ಟುಕೊಡುವ ವೇದನೆಯನ್ನನುಭವಿಸಿಯಾದರೂ ಹಿಂದೀಯರು ಔದಾರ್ಯದಿಂದ ಈ ಸೂಚನೆಗಳನ್ನು ಅಂಗೀಕರಿಸಿ ಕಾರ್ಯಪ್ರವೃತ್ತರಾಗಬೇಕು- ಏಕೆಂದರೆ ನಮ್ಮ ಮುಂದೆ ಶಾಂತಪೂರ್ಣ ರಚನೆ ತಪ್ಪಿದರೆ ಯಾದವೀ ಕಲಹ, ಅಶಾಂತಿ; ಅಥವಾ ಸಹಕಾರ ತಪ್ಪಿದರೆ ಅನೈಕ್ಯ ಮತ್ತು ಅವ್ಯವಸ್ಥೆಗಳು ಇವೆಯೆಂದು ಅವರು ಎಚ್ಚರಿಕೆಯಿತ್ತರು.

ಮುಖ್ಯ ಸೇನಾಪತಿಗಳು ಹಿಂದುಸ್ತಾನಿಯಲ್ಲಿ ಮಾತನಾಡಿದರು. ಅವರು, ಇನ್ನು ಮುಂದೆ ಸಂರಕ್ಷಣ ಮಂತ್ರಿತ್ವಕ್ಕೆ ಒಬ್ಬ ಹಿಂದೀಯನೆ ಬರುವನೆಂದೂ ತಾವು ನೆಲಜಲ ಆಕಾಶ ಪಡೆಗಳ ಹಿತ ಅಧಿಪತ್ಯಗಳಿಗೆ ಮಾತ್ರ ಹೊಣೆಗಾರರಾಗಿದ್ದು ಬ್ರಿಟನದಲ್ಲಿ ಸೇನಾಪತಿಗಳು ನಾಗರಿಕ ಮಂತ್ರಿಗಳ ಕೈಕೆಳಗೆ ದುಡಿಯುವಂತೆ ತಾವೂ ದುಡಿಯುವದಾಗಿ ಹೇಳಿದರು. ಮುಖ್ಯ ಸೇನಾಪತಿಗಳ ಈ ಹೇಳಿಕೆ ನಿಜವಾಗಿ ಗಮನಾರ್ಹವಾಗಿದೆ.

### ಅಭಿಪ್ರಾಯಗಳು, ಟೀಕೆಗಳು

ಕಾಂಗ್ರೆಸ್ ಲೀಗ ಬಿಟ್ಟರೆ-ಅವುಗಳ ಪ್ರತಿಕ್ರಿಯೆಗಳನ್ನು ಮುಂದೆ ವಿವರಿಸಲಾಗುವದು—ಮಂತ್ರಿತ್ರಯರ ಸೂಚನೆಗಳಿಗೆ ಸಾಮಾನ್ಯವಾಗಿ ಅನುಕೂಲ ಪ್ರತಿಕ್ರಿಯೆಗಳೆ ಸಾರ್ವತ್ರಿಕವಾಗಿ ವ್ಯಕ್ತಗೊಳಿಸಲ್ಪಟ್ಟವೆಯೆನ್ನಬೇಕು. ಜಯಪ್ರಕಾಶ ನಾರಾಯಣರೇ ಮೊದಲಾದ ಹೋರಾಟವಾದಿಗಳು ಈ ಸೂಚನೆಗಳನ್ನು ನಿರಾಕರಿಸಬೇಕೆಂದು ವಾದಿಸುತಿರುವದು ನಿಜ. ಆದರೆ ಭಾವನಾತ್ಮಕ ವಿಚಾರಗಳನ್ನು ಬದಿಗಿರಿಸಿದರೆ ವ್ಯಾಪಾರಿ ಮತ್ತು ಅರ್ಥಶಾಸ್ತ್ರ ಪ್ರಮುಖರಿಂದಲೇ ಗಮನಾರ್ಹವಾದ ಆಕ್ಷೇಪಗಳು ಬರುತಿವೆ. ಸರ್ ಚುನಿಲಾಲ ಮೇಥಾರವರು ಸುಂಕವನ್ನು ಯೂನಿಯನ್ ಸರಕಾರದ ಅಧಿಕಾರ ವ್ಯಾಪ್ತಿಯಿಂದ ಹೊರಗಿಟ್ಟದ್ದರಿಂದಾಗುವ ಅನಾಹುತವನ್ನು ವಿವರಿಸಿದ್ದಾರೆ. ಸುಂಕದ ವಿಷಯ ಕೇಂದ್ರಕ್ಕೆ ಸೇರದಿದ್ದರೆ ಕೆಲವೊಂದು ಪ್ರಾಂತಗಳು—ಉದಾಹರಣೆಗಾಗಿ ಸಿಂಧ—ಸುಂಕದ ವಿಷಯದಲ್ಲಿ ಕೇಂದ್ರದೊಡನೆ ಸಹಕರಿಸಲೊಪ್ಪದೆ ವಿದೇಶಗಳಿಂದ ಸಾಮುಗ್ರಿಗಳನ್ನು ತರಿಸಿ ನೆರೆ ಪ್ರಾಂತಗಳಲ್ಲಿ ಮಾರತೊಡಗಬಹುದು. ಆದರಿಂದ ದೇಶದ ಆರ್ಥಿಕ ಪ್ರಣಾಳಿ ಗಲಿಬಿಲಿಯಾಗುವದು ನಿಶ್ಚಯವೆಂದು ಅವರಿಗನಿಸಿದೆ. ಆರ್ದೇಶೀರ ದಲಾಲರು ಸುಂಕ ಮತ್ತು ಚಲನ ಹಾಗು ಯೋಜನೆಯ ಖಾತೆಗಳೂ ಯೂನಿಯನ್ ಸರಕಾರಕ್ಕೇ ಸೇರಬೇಕೆಂದೂ ಇಲ್ಲದಿದ್ದರೆ ದೇಶದ ಔದ್ಯೋಗಿಕ ಪ್ರಗತಿಗೆ ತಾಳ ತಂತಿಯಿಲ್ಲದಂತಾಗುವದೆಂದೂ ಹೇಳಿರುವರು. ಹಿಂದೂ ಮಹಾಸಭೆಯ ತಾತ್ಪೂರ್ತಿಕ ಅಧ್ಯಕ್ಷ ಶ್ರೀ ಭೋಪಟಕರರು ಮಂತ್ರಿತ್ರಯ ಯೋಜನೆಯಿಂದ ಸಂತುಷ್ಟರಾಗಿ ಛಂಗನೆ ನೆಗೆದಿದ್ದರೆ, ಅಕಾಲಿ ಶೀಖರು ಘಟನಾ ಸಮಿತಿಯಲ್ಲಿ ತಮಗೆ ನಾಲ್ಕೇ ಸ್ಥಾನಗಳು ಸಿಕ್ಕಿವೆಯೆಂದು ಸಿಟ್ಟಿಗೆದ್ದು ವಿರೋಧಿಸುವ ಬೆದರಿಕೆ ಹಾಕಿದ್ದಾರೆ. ಸರ್ ತೇಜಬಹದ್ದೂರರೂ ಯೋಜನೆಯಿಂದ ತೃಪ್ತರಾಗಿದ್ದಾರೆ. ಅವರು ಗಾಂಧೀಜಿಗೊಂದು ತಂತಿ ಕಳಿಸಿ ಅವರು ತಮ್ಮ ಪ್ರಭಾವಬೀರಿ ಮಂತ್ರಿತ್ರಯರಿಗೆ ಯೋಗ್ಯ ಮಾರ್ಗ ತೋರಿಸುವಲ್ಲಿ ಯಶಸ್ವಿಯಾದುದಕ್ಕೆ ಅವರನ್ನು ಅಭಿನಂದಿಸಿದ್ದಾರೆ.

### ಒತ್ತಾಯದಿಂದ ಹೇರುವದಿಲ್ಲವಂತೆ!

ತಾ. ೧೭ ಕ್ಕೆ ಬ್ರಿಟಿಶ ಮಂತ್ರಿತ್ರಯರು ಪತ್ರಿಕಾ ಪರಿಷತ್ತಿನಲ್ಲಿ ಹಲ ಪ್ರಶ್ನೆಗಳ ಬಗೆಗೆ ವಿವರಣೆಗಳನ್ನಿತ್ತರು. ಆದರಲ್ಲಿ ಅವರು ಇತರ ವಿಷಯಗಳ ನಡುವೆ, ಈ ಯೋಜನೆಗೆ ಪ್ರಮುಖ ಪಕ್ಷಗಳ ಸಮ್ಮತಿಯನ್ನು ದೊರಕಿಸುವದೇ ತಮ್ಮ ಮುಂದಿನ ಹೆಜ್ಜೆಯೆಂದು ಹೇಳಿದರು. ಹಾಗೆಯೆ ಅವರು ಈ ಯೋಜನೆ ಕೇವಲ ಸೂಚನಾತ್ಮಕವಾದುದಿದ್ದು ಅದನ್ನು ಒತ್ತಾಯದಿಂದ ಹೇರಬಯಸುವದಿಲ್ಲವೆಂದೂ ಹೇಳಿದರು. ಕಾಂಗ್ರೆಸ್ಸು ಯೋಜನೆಗೊಪ್ಪಿ ಲೀಗು ನಿರಾಕರಿಸಿದರೆ ಮುಂದೇನೆಂದು ಅವರು ಹೇಳಲಿಲ್ಲ. ಅಲ್ಪಸಂಖ್ಯಾಕರಿಗೆ ದೇಶದ ಪ್ರಗತಿಯನ್ನು ತಡೆಯಗೊಡಲಾರೆವೆಂದು ಅಟ್ಲಿಯವರು ಹೇಳಿದ್ದನ್ನೇ ಗಟ್ಟಿಯಾಗಿ ಹಿಡಿದು ಬ್ರಿಟಿಶ ಸರಕಾರ ಮುನ್ನುಗ್ಗುವದೆ? ಗೊತ್ತಿಲ್ಲ ಲೀಗು ಸಹಕರಿಸಲೊಪ್ಪದಿದ್ದರೂ ನಿಜವಾದ ಅಧಿಕಾರ ಕೊಟ್ಟರೆ ನಡುಗಾಲ ಸರಕಾರದಲ್ಲಿ ಸೇರಲು ಕಾಂಗ್ರೆಸ್ಸು ಸಮ್ಮತಿಸಿದೆಯೆಂದು ಹೇಳಲಾಗಿದೆ. ಆದರೆ ಬ್ರಿಟಿಶರು ಈ ವರೆಗೆ ತಮ್ಮ ಗೆಳೆಯರಾಗಿದ್ದ ಲೀಗದವರನ್ನು ಅಷ್ಟು ಬೇಗ ಕೈಬಿಡಬಹುದೆ? ಈ ಎಲ್ಲ ಪ್ರಶ್ನೆಗಳು ಅಸ್ಪುಟವಾಗಿಯೆ ಉಳಿದಿವೆ.

### ಗಾಂಧೀಜಿಯ ಆಶೀರ್ವಾದ

ಸಿಮುಲಾ ಪರಿಷತ್ತಿಗೆ ಸಂಬಂಧಿಸಿದ ಪತ್ರವ್ಯವಹಾರಗಳನ್ನು ನೋಡಿದರೆ ಮಂತ್ರಿತ್ರಯರ ಸೂಚನೆಗಳು ಕಾಂಗ್ರೆಸ್ಸಿನ ಕನಿಷ್ಠ ಬೇಡಿಕೆಗಳಿಗಿಂತ ಎಷ್ಟೋ ಹಿಂದಿವೆ, ಎಂದು ಸ್ಪಷ್ಟವಾಗುತ್ತದೆ. ಆದರೆ ಕಾಂಗ್ರೆಸ್ಸು ಈ ಯೋಜನೆಯನ್ನು ಅಂಗೀಕರಿಸುವ ಲಕ್ಷಣಗಳೇ ಕಾಣಬರುತ್ತವೆ. ಮೊದಲನೆಯದಾಗಿ ಗಾಂಧೀಜಿಯವರ ಆಶೀರ್ವಾದ ಯೋಜನೆಗೆ ದೊರೆತಿದೆಯೆಂಬಲ್ಲಿ ಸಂದೇಹವಿಲ್ಲ. ಅವರು ತಾ. ೧೭ ರ ತಮ್ಮ ಪ್ರಾರ್ಥನಾ ಸಭೆಯಲ್ಲಿ "ದುಃಖಭರಿತವಾದ ಈ ಹಿಂದುಸ್ತಾನವನ್ನು ದುಃಖರಹಿತವಾಗಿ ಮಾಡುವ ಬೀಜವು ಬ್ರಿಟಿಶ ಸೂಚನೆಗಳಲ್ಲಿವೆ" "ಬ್ರಿಟಿಶ ರಾಯಭಾರಕಾನು ಸಿದ್ಧಗೊಳಿಸಿದ ಸೂಚನೆಗಳಿಗಾಗಿ ಹೆಮ್ಮೆಪಡಲು ಅರ್ಹವಾಗಿದೆ" ಎಂದು ಸ್ಪಷ್ಟವಾಗಿ ತಮ್ಮ ಸಂತುಷ್ಟಿಯನ್ನು ವ್ಯಕ್ತಗೊಳಿಸಿದ್ದಾರೆ. ಅಂದಮೇಲೆ ಕಾಂಗ್ರೆಸ್ಸು ಯೋಜನೆಯನ್ನು ನಿರಾಕರಿಸಿದರೆ ಆಶ್ಚರ್ಯವೇ ಸರಿ. ಕಾಂಗ್ರೆಸ್ ಕಾರ್ಯಸಮಿತಿಯಲ್ಲಿ ಗುಂಪುಗಳ ಯೋಜನೆಗೆ ಪ್ರಬಲ ವಿರೋಧವುಂಟೆಂದು ಹೇಳಲಾಗಿದೆ. ಆಸಾಮು ಮತ್ತು ಗಡಿನಾಡು ಪ್ರಾಂತಗಳು (ಬ) ಮತ್ತು (ಕ) ಗುಂಪುಗಳಲ್ಲಿ ಸೇರಲು ಸಮ್ಮತಿಸುವದಿಲ್ಲೆಂದು ಮಂತ್ರಿತ್ರಯರಿಗೆ ತಿಳಿಸಲಾಗಿದೆಯೆಂದೂ ಸುದ್ದಿ. ಕಾಂಗ್ರೆಸ್ಸು ಕೆಲವೊಂದು ವಿಷಯದ ಮೇಲೆ ಮಂತ್ರಿತ್ರಯರಿಂದ ವಿವರಣೆಗಳನ್ನು ಕೇಳಿದೆಯೆಂದೂ ಅದಕ್ಕೆ ಬಂದ ಉತ್ತರಗಳು ತೃಪ್ತಿಕರವಾಗಿವೆಯೆಂದೂ ಹೇಳಲಾಗಿದೆ. ಸಂಸ್ಥಾನಗಳ ಮೇಲೆ ಈಗ ಬ್ರಿಟಿಶ ಚಕ್ರವರ್ತಿ ಪ್ರತಿನಿಧಿ ಇಟ್ಟುಕೊಂಡಿರುವ ವರಿಷ್ಠಾಧಿಕಾರ ಇನ್ನು ಮುಂದೆ ಇಲ್ಲದಂತಾಗುವದೆಂದೂ ಅದನ್ನು ಬ್ರಿಟಿಶ ಚಕ್ರವರ್ತಿಯೂ ಇಟ್ಟುಕೊಳ್ಳುವದಿಲ್ಲ ಹಿಂದೀ ಕೇಂದ್ರ ಸರಕಾರಕ್ಕೂ ಕೊಡುವದಿಲ್ಲವೆಂದೂ ಇದರಿಂದ ಉದ್ಭೂತವಾದ ತೆರವನ್ನು ತುಂಬಲು ಸಂಸ್ಥಾನಗಳು ಯೂನಿಯನ್ನೊಡನೆ ಒಪ್ಪಂದ ಮಾಡಿಕೊಳ್ಳುವವೆಂದೂ ಒಂದು ಸರಕಾರಿ ಪ್ರಕಟಣೆ ಸ್ಪಷ್ಟೀಕರಿಸುತ್ತದೆ. ಅರ್ಥಾತ್ ಸಂಸ್ಥಾನಗಳಿಗೆ ಬ್ರಿಟಿಶ ಪ್ರಾಂತಗಳ ಸಮಾನತೆ ದೊರೆತಂತಾಗುವದು. ಈ ಹೇಳಿಕೆಗೆ ಕಾಂಗ್ರೆಸ್ಸು ಎತ್ತಿದ ಸಂಶಯವೇ ಕಾರಣವಾಗಿರಬಹುದು. ಅದು ಹೇಗೆಯೆ ಇರಲಿ, ಈ ವರೆಗೂ ಕಾಂಗ್ರೆಸ್ಸು ಯಾವ ಅಧಿಕೃತ ನಿರ್ಣಯವನ್ನೂ ಹೊರಗೆ ಹಾಕಿಲ್ಲ. ಈಗ, ಕಾಂಗ್ರೆಸ್ ಕಾರ್ಯಸಮಿತಿ ಚದರಿ, ೧೫ ದಿನಗಳ ಮೇಲೆ ಲೀಗ ನಿರ್ಣಯ ಹೊರಬಿದ್ದ ಮೇಲೆ ತನ್ನ ನಿರ್ಣಯ ಮಾಡಲು ಕೂಡಬಹುದೆಂಬ ವರದಿಗಳು ಬರುತ್ತಿವೆ. ಎಂದಿನಂತೆ ಲೀಗಿಗೆ ನೆವವನ್ನು ದೊರಕಿಸಿಕೊಡಲು ಈಗ ಕಾಂಗ್ರೆಸ್ಸು ಸಿದ್ಧವಿಲ್ಲೇನೊ!

### ಲೀಗೇನು ಮಾಡುವದು?

ಲೀಗ್ ವರ್ಗಗಳೂ ಪತ್ರಿಕೆಗಳೂ ಆಶ್ಚರ್ಯಕರ ಮೌನವನ್ನು- ಅಥವಾ ಮಾತಾಡಿದಾಗ ಎರಡೂ ದಂಡೆಯ ಮೇಲೆ ಕೈಯಿಡುವ ಜಾಣತನವನ್ನು- ತೋರುತಿವೆ. ಮುಂದಾಳ್ತನಕ್ಕೆ ಜಿನ್ನಾರನ್ನೇ ಎದುರು ನೋಡಲಾಗಿದೆ. ಜಿನ್ನಾ ಸಾಹೇಬರು ತಾ. ೨೨ ಕ್ಕೆ— ಬಹಳ ದಿನಗಳ ನಂತರ-- ಸಿಮುಲಾದ ತಲೆತಿರುಗಿಸುವ ಎತ್ತರದಿಂದ ತಮ್ಮ ಮೊದಲ ಪ್ರತಿಕ್ರಿಯೆಯನ್ನು ವ್ಯಕ್ತಗೊಳಿಸಿ ೨೦೦೦ ಶಬ್ದಗಳ ಹೇಳಿಕೆ ಹೊರಡಿಸಿದರು. ಮುಸ್ಲಿಮರ ಮೂಲಭೂತ ಬೇಡಿಕೆಯೂ ಹಿಂದೂ ಮುಸ್ಲಿಮರಿಬ್ಬರ ಹಿತದ ಏಕಮಾತ್ರ ಉಪಾಯವೂ ಆದ ಪಾಕಿಸ್ತಾನ ಬೇಡಿಕೆಯನ್ನು, ಅದೂ ಅಪ್ರಿಯ ವಚನಗಳಲ್ಲಿ, ರಾಯಭಾರದವರು ನಿರಾಕರಿಸಿದ್ದಕ್ಕೆ ಅವರು ವಿಷಾದ ತೋರಿದ್ದಾರೆ. ಆದರೆ ಇದು ತಮ್ಮ ವೈಯಕ್ತಿಕ ಅಭಿಪ್ರಾಯವೆಂದೂ ಕೊನೆಯ ನಿರ್ಣಯ ಜೂನ ಮೂರಕ್ಕೆ ಸೇರುವ ಲೀಗ್ ಕಾರ್ಯಸಮಿತಿಗೇ ಸೇರಿದ್ದೆಂದೂ ಹೇಳಿ ಜಿನ್ನಾರುಮತ್ತೆ ಸಂದಿಗ್ಧವಾತಾವರಣವನ್ನುಂಟು ಮಾಡಿದ್ದಾರೆ. ಲೀಗ್‌ಕಾರ್ಯ ಸಮಿತಿಯೇನು ಮಾಡಬಹುದು? ಜಿನ್ನಾರ ಬಿಗುಹಿನ ಧೋರಣೆಗೆ ಕಾರ್ಯಸಮಿತಿಯಲ್ಲಿ ಪ್ರಬಲ ವಿರೋಧವುಂಟಾಗಿದೆಯೆಂದು ಹೇಳಲಾಗಿದೆ. ಲೀಗ ಕಾರ್ಯ ಸಮಿತಿಯ ಪ್ರಭಾವಶಾಲಿ ಸದಸ್ಯರೊಬ್ಬರು "ಪಾಕಿಸ್ತಾನವನ್ನು ಒಂದೇ ನೆಗೆತಕ್ಕೆ ದೊರಕಿಸುವದು ಸಾಧ್ಯವಿಲ್ಲೆಂದರಿತು" ಮುಸ್ಲಿಂ ಲೀಗು ಈ ಯೋಜನೆಯನ್ನು ಒಪ್ಪುವದು ಎಂಬದಾಗಿ ಹೇಳಿದರೆಂದು ಲೀಗ್ ಪ್ರಭೃತಿಗಳ ಆಶ್ರಯದಲ್ಲೇ ನಡೆದಿರುವ ಓರಿಯಂಟ್ ಪ್ರೆಸ್ ಸುದ್ದಿ ಸಂಸ್ಥೆಯ ವರದಿಯುಂಟು. ಬಹುಶಃ, ಚರ್ಚಿಲ್ ಪ್ರಭೃತಿಗಳ ವಿರೋಧ ಫಲಕಾರಿಯಾಗದೆ ಬ್ರಿಟಿಶ ಸರಕಾರ ದೃಢ ಧೋರಣೆಯನ್ನು ಅನುಸರಿಸಿದರೆ ಲೀಗು ಯೋಜನೆಯನ್ನು ಒಪ್ಪಲೂ ಬಹುದು-- ಪಾಕಿಸ್ತಾನದ ದಾರಿಯಲ್ಲೊಂದು ದೊಡ್ಡ ಹೆಜ್ಜೆಯೆಂದು. ಏನೇ ಆದರೂ ಹಿಂದೆ ಜಿನ್ನಾರ ವಾಣಿಯಲ್ಲಿದ್ದ ಸೊಕ್ಕು ಈ ಬಾರಿಯ ಹೇಳಿಕೆಯಲ್ಲಿ ಅದೃಶ್ಯವಾಗಿದೆಯೆಂಬುದು ಗಮನಾರ್ಹ.

### ಮಧ್ಯಕಾಲದ ಸರಕಾರ

ಇತ್ತ ನಡುಗಾಲ ಸರಕಾರದ ವಿಷಯಕ್ಕೆ ವಾಯಿಸರಾಯರು ಅಧ್ಯಕ್ಷ ಆಝಾದ ಮತ್ತು ಜವಾಹರಲಾಲರೊಡನೆ ಈಗಾಗಲೆ ವಿಚಾರವಿನಿಮಯ ಪ್ರಾರಂಭಿಸಿದ್ದಾರೆ. ಲೀಗ ಕಾರ್ಯ ಸಮಿತಿಯ ಸಭೆ ವಿಲಂಬವಾದುದರಿಂದಲೆ ಈ ತಿಂಗಳ ಅಂತ್ಯಕ್ಕೇ ಸ್ಥಾಪಿತವಾಗಬೇಕಾಗಿದ್ದ ನಡುಗಾಲ ಸರಕಾರ ಮುಂದಿನ ತಿಂಗಳ ಮಧ್ಯದವರೆಗೂ ಮುಂದೆ ಹೋಗುವ ಲಕ್ಷಣ ಕಾಣುತ್ತದೆ. ನಡುಗಾಲ ಸರಕಾರದ ಸಂಘಟನೆಯನ್ನು ಕುರಿತು ಹಲ ಗಾಳಿಪಟಗಳು ಈಗಾಗಲೆ ಹಾರತೊಡಗಿವೆ. ಜಿನ್ನಾ ಸಾಹೇಬರಿಗೆ ಪ್ರಧಾನ ಮಂತ್ರಿತ್ವ, ಜವಾಹರಲಾಲರಿಗೆ ವಿದೇಶ, ಶರಚ್ಚಂದ್ರರಿಗೆ ಕಾಯಿದೆ, ಆಸಫಅಲ್ಲಿ ಸಂರಕ್ಷಣೆ, ವಲ್ಲಭಭಾಯಿ ಗೃಹ, ಸಿ. ಡಿ. ದೇಶಮುಖ (ರಿಜರ್ವ ಬ್ಯಾಂಕ ಗವರ್ನರ) ಹಣಕಾಸು ಮೊದಲಾಗಿ ಊಹಕರ ಕಲ್ಪನೆ. ಇವೆಲ್ಲದರ ಸತ್ಯಾಸತ್ಯತೆಗೆ ಕಾಲವೇ ಸಾಕ್ಷ್ಯ ಹೇಳಬಲ್ಲದು.

## ಘಟನಾ ಸಮಿತಿ ರಚಿಸುವದೆಂತು?

ಹಿಂದುಸ್ತಾನದ ಭಾವೀ ರಾಜ್ಯಘಟನೆ ರಚಿಸಲು ಈಗಿನ ಪ್ರಾಂತಿಕ ಶಾಸನ ಸಭೆಗಳಿಂದ ಸುಮಾರು ೪೦೦ ಜನರನ್ನು ಆರಿಸಿ ಘಟನಾ ಸಮಿತಿ ನೇಮಿಸಬೇಕೆಂದು ಬ್ರಿಟಿಶ ಮಂತ್ರಿತ್ರಯರು ತಮ್ಮ ಯೋಜನೆಯಲ್ಲಿ ಹೇಳಿರುವರಷ್ಟೇ. ಅದರ ವಿವರಗಳು ಇಂತಿರುತ್ತವೆ. ಆಯಾ ಪ್ರಾಂತಿಕ ಶಾಸನ ಸಭೆಗಳಲ್ಲಿಯ ಸಾಮಾನ್ಯ, ಮುಸ್ಲಿಂ ಮತ್ತು ಶೀಖ ಪ್ರತಿನಿಧಿಗಳು ತಂತಮ್ಮ ಪ್ರತಿನಿಧಿಗಳನ್ನು ಕೆಳಗೆ ತೋರಿಸಿದಂತೆ ಪ್ರಮಾಣಬದ್ಧ ಮತದಾನ ಪದ್ಧತಿಯಿಂದ ಆರಿಸಬೇಕು.

### ಗುಂಪು (ಅ)

| ಪ್ರಾಂತ | ಸಾಮಾನ್ಯ ಸ್ಥಳಗಳು | ಮುಸ್ಲಿಂ ಸ್ಥಳಗಳು | ಒಟ್ಟು |
|---|---|---|---|
| ಮದ್ರಾಸ | ೪೫ | ೪ | ೪೯ |
| ಮುಂಬಯಿ | ೧೯ | ೨ | ೨೧ |
| ಸಂ. ಪ್ರಾಂತ | ೪೭ | ೮ | ೫೫ |
| ಬಿಹಾರ | ೩೧ | ೫ | ೩೬ |
| ಮಧ್ಯಪ್ರಾಂತ | ೧೬ | ೧ | ೧೭ |
| ಓಡಿಸಾ | ೯ | ೦ | ೯ |
| ಒಟ್ಟು | ೧೬೭ | ೨೦ | [illegible]೭ |

### ಗುಂಪು (ಬ)

| ಪ್ರಾಂತ | ಸಾಮಾನ್ಯ | ಮುಸ್ಲಿಂ | ಶೀಖ | ಒಟ್ಟು |
|---|---|---|---|---|
| ಪಂಜಾಬ | ೮ | ೧೬ | ೪ | ೨೮ |
| ಗಡಿನಾಡ | ೦ | ೩ | ೦ | ೩ |
| ಸಿಂಧ | ೧ | ೩ | ೦ | ೪ |
| ಒಟ್ಟು | ೯ | ೨೨ | ೪ | ೩೫ |

### ಗುಂಪು (ಕ)

| ಪ್ರಾಂತ | ಸಾಮಾನ್ಯ | ಮುಸ್ಲಿಂ | ಒಟ್ಟು |
|---|---|---|---|
| ಬಂಗಾಲ | ೨೭ | ೩೩ | ೬೦ |
| ಆಸಾಮು | ೭ | ೩ | ೧೦ |
| ಒಟ್ಟು | ೩೪ | ೩೬ | ೭೦ |

| | |
|---|---|
| ಬ್ರಿಟಿಶ್ ಹಿಂದುಸ್ತಾನದ ಪ್ರತಿನಿಧಿಗಳ ಒಟ್ಟು ಸಂಖ್ಯೆ | ೨೯೨ |
| ಸಂಸ್ಥಾನಗಳಿಗೆ | ೯೩ |
| | ೩೮೫ |

ಚೀಫ್ ಕಮೀಶನರ ಪ್ರಾಂತಗಳಿಗೆ ಪ್ರಾತಿನಿಧ್ಯ ಕೊಡುವದರ ಸಲುವಾಗಿ, ದಿಲ್ಲಿ ಮತ್ತು ಅಜಮೀರ-ಮೇವಾಡ ಭಾಗಗಳಿಂದ ಕೇಂದ್ರ ಶಾಸನ ಸಭೆಗೆ ಈಗ ಆರಿಸಿ ಬಂದ ಇಬ್ಬರು ಸದಸ್ಯರನ್ನು ಮತ್ತು ಕೊಡಗಿನಿಂದ ಓರ್ವ ಪ್ರತಿನಿಧಿ ಹೀಗೆ ಮೂವರನ್ನು (ಅ) ಗುಂಪಿಗೆ ಸೇರಿಸಲಾಗುವದು.

ಬ್ರಿಟಿಶ ಬಲುಚಿಸ್ತಾನದ ಓರ್ವ ಪ್ರತಿನಿಧಿಯನ್ನು ಬ ಗುಂಪಿಗೆ ಕೂಡಿಸಲಾಗುವದು.

ಘಟನಾ ಸಮಿತಿಯಲ್ಲಿ ಸಂಸ್ಥಾನ ಪ್ರತಿನಿಧಿಗಳಿಗೆ ಸಹ ಯೋಗ್ಯ ಪ್ರಾತಿನಿಧ್ಯ ಕೊಡಬೇಕೆಂಬ ವಿಚಾರವಿದೆ. ಆದರೆ ಅವರ ಸಂಖ್ಯೆ ೯೩ ಮೀರಕೂಡದು, ಮತ್ತು ಅವರ ಆಯ್ಕೆಯನ್ನು ವಿಚಾರವಿನಿಮಯದಿಂದ ಬಗೆಹರಿಸಬೇಕು. ಪ್ರಾರಂಭದಲ್ಲಿ ವಿಚಾರವಿನಿಮಯ ಸಮಿತಿಯು ಅವರ ಪ್ರತಿನಿಧಿಯಾಗಿ ಕೆಲಸ ಮಾಡುವದು.

# ಸಿಮುಲಾ ಪರಿಷತ್ತು ಮುರಿದುದೇಕೆ?

## ಒತ್ತಾಯದ ಗಂಪುಗಳಿಗೆ, ಜಾತೀಯ ಸಮಪ್ರಾತಿನಿಧ್ಯಕ್ಕೆ ಕಾಂಗ್ರೆಸ್ಸಿನ ವಿರೋಧ— ಒಂದೇ ಘಟನಾ ಸಮಿತಿಗೆ, ಯೂನಿಯನ್ನಿನ ಕರ ಎತ್ತುವ ಅಧಿಕಾರಕ್ಕೆ ಲೀಗ ವಿರೋಧ

### ಸಿಮುಲಾ ಪರಿಷತ್ತಿನ ಪತ್ರವ್ಯವಹಾರಗಳ ಸಾರ

ಸಿಮುಲೆಯಲ್ಲಿ ಕೂಡಿದ ತ್ರಿಪಕ್ಷ ಪರಿಷತ್ತು ಮುರಿಯಲು ಕಾಂಗ್ರೆಸ್-ಲೀಗ ದೃಷ್ಟಿಕೋನಗಳಲ್ಲಿರುವ ಮೂಲಭೂತ ಮತಭೇದಗಳೇ ಕಾರಣವಾದುವೆಂದು ಮೊನ್ನೆ ಶನಿವಾರ (೧೮ ಮೇ) ಪ್ರಸಿದ್ಧಿಸಲ್ಪಟ್ಟ ತ್ರಿಪಕ್ಷ ಪರಿಷತ್ತಿನ ಪತ್ರವ್ಯವಹಾರಗಳಿಂದ ತಿಳಿಯಬರುತ್ತದೆ. ಮುಸ್ಲಿಂ ಲೀಗಿನ ಕನಿಷ್ಠ ಬೇಡಿಕೆಗಳ ಮನವಿಯೊಂದು ಮತ್ತು ಘಟನಾ ಸಮಿತಿ ಹಾಗು ಮುಸ್ಲಿಂ ಲೀಗ ಬೇಡಿಕೆಗಳ ಬಗ್ಗೆ ಕಾಂಗ್ರೆಸ್ಸಿನ ಅಭಿಪ್ರಾಯಗಳನ್ನೊಳಗೊಂಡ ಮಹತ್ವದ ಪತ್ರಗಳು ಸೇರಿ ೨೧ ಪತ್ರಗಳು ಪ್ರಸಿದ್ಧವಾಗಿವೆ. ಅವುಗಳ ಸಾರವನ್ನು ಈ ಕೆಳಗೆ ಸಂಗ್ರಹಿಸಲಾಗಿದೆ.

ಪಂ. ನೆಹರೂ ಹಾಗು ಜಿನ್ನಾ ಸಾಹೇಬರಲ್ಲಿ ನಡೆದ ಮಾತುಕತೆಗಳ ಸಂಬಂಧದ ಪತ್ರವ್ಯವಹಾರದಲ್ಲಿ ಉಭಯ ಪಕ್ಷಗಳ ಮತಭೇದವನ್ನು ನಿರ್ಣಯಿಸಲು ಆಂಗ್ಲ, ಹಿಂದೂ, ಮುಸ್ಲಿಮ ಮತ್ತು ಸೀಖರನ್ನು ಬಿಟ್ಟು ಬೇರೆ ಜನರುಳ್ಳ ಪಂಚಮಂಡಲವನ್ನು ನೇಮಿಸಬೇಕೆಂದೂ ಅದಕ್ಕೆ ಕಾಂಗ್ರೆಸ್ ಲೀಗುಗಳೆರಡೂ ಪಂಚರ ಯಾದಿಗಳನ್ನು ಸಿದ್ಧಗೊಳಿಸಬೇಕೆಂದೂ ನೆಹರೂ ಅವರು ಸೂಚಿಸಿದ್ದೂ ಕೊನೆಗೆ ಯಾವುದೊಂದೂ ಇತ್ಯರ್ಥವಾಗದೆ ಮಾತುಕತೆ ಕೊನೆಗಂಡದ್ದೂ ತಿಳಿದುಬರುತ್ತದೆ.

## ಮೊದಲ ಸೂಚನೆಗಳು

ಮಂತ್ರಿತ್ರಯರು ಎಲ್ಲ ಪಕ್ಷಗಳ ಹೇಳಿಕೆಗಳನ್ನೂ ಕೇಳಿಕೊಂಡ ನಂತರ ಕಾಂಗ್ರೆಸ್ ಲೀಗುಗಳಲ್ಲಿ ಒಡಂಬಡಿಕೆಯನ್ನು ಸಾಧಿಸುವ ಮತ್ತೊಂದು ಪ್ರಯತ್ನವೆಂದು ಎರಡೂ ಪಕ್ಷಗಳ ೪-೪ ಪ್ರತಿನಿಧಿಗಳನ್ನು ಆಮಂತ್ರಿಸಿ ಕಾಂಗ್ರೆಸ್ ಅಧ್ಯಕ್ಷ ಮೌಲಾನಾ ಅಝಾದರಿಗೂ ಲೀಗ್ ಅಧ್ಯಕ್ಷ ಬ್ಯಾ. ಜಿನ್ನಾ ಅವರಿಗೂ ಬರೆದ ಪತ್ರ (ತಾ. ೨೭ ಎಪ್ರಿಲ್) ದಲ್ಲಿ ಚರ್ಚೆಯ ತಳಹದಿಯಾಗಿ ಬ್ರಿಟಿಶ ಹಿಂದುಸ್ತಾನಕ್ಕಾಗಿ ಈ ಕೆಳಗಿನ ಮೂಲಭೂತ ಘಟನಾತ್ಮಕ ಸೂಚನೆಗಳನ್ನು ಮಾಡಿದರು:

ವಿದೇಶ, ಸಂರಕ್ಷಣ ಮತ್ತು ಮಾರ್ಗ ಮತ್ತು ಅಂಚೆ ಸೌಕರ್ಯಗಳನ್ನು ನೋಡಿಕೊಳ್ಳಲು ಒಂದು ಯೂನಿಯನ್ ಸರಕಾರ.

ಪ್ರಾಂತಗಳನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಬೇಕು— ಒಂದು ಹಿಂದೂ ಬಹುಸಂಖ್ಯಾಕ, ಮತ್ತೊಂದು ಮುಸ್ಲಿಂ ಬಹುಸಂಖ್ಯಾಕ. ಆಯಾ ಗುಂಪಿನಲ್ಲಿರುವ ಪ್ರಾಂತಗಳು ಯಾವ ವಿಷಯಗಳನ್ನು ಸಾಮಾನ್ಯವಾಗಿ ಸಾಗಿಸಬೇಕೆಂದು ಅಪೇಕ್ಷಿಸುವವೊ ಆ ವಿಷಯಗಳ ಮೇಲೆ ಆ ಗುಂಪಿನ (ಸರಕಾರದ) ಅಧಿಕಾರವಿರುವದು. ಉಳಿದೆಲ್ಲ ವಿಷಯಗಳೂ ಪ್ರಾಂತಿಕ ಸರಕಾರಗಳಿಗೇ ಸೇರುವವಲ್ಲದೆ ಶಿಷ್ಟ ಸಾರ್ವಭೌಮಾಧಿಕಾರಗಳೂ ಪ್ರಾಂತಗಳ ಕೈಲೇ ಉಳಿಯುವವು.

ಈ ಕಟ್ಟುಪಾಡಿನಲ್ಲಿ ಹಿಂದೀ ಸಂಸ್ಥಾನಗಳೂ ಭಾಗ ವಹಿಸುವವೆಂದು ಭಾವಿಸಲಾಗಿದೆ. ಯಾವ ಕರಾರಿನಿಂದ ಅವು ಭಾಗ ವಹಿಸುವವೆಂಬದನ್ನು ಮಾತುಕತೆಗಳಿಂದ ನಿರ್ಣಯಿಸಿಕೊಳ್ಳಲಾಗುವದು.

ಈ ಕರೆಯನ್ನು ಸ್ವೀಕರಿಸುವ ಮೊದಲು ಕಾಂಗ್ರೆಸ್ ಅಧ್ಯಕ್ಷರು ಮಂತ್ರಿತ್ರಯರಿಂದ ಕೆಲ ಸ್ಪಷ್ಟೀಕರಣಗಳನ್ನು ಕೇಳಿದ್ದಲ್ಲದೆ ಈ ಸೂಚನೆಗಳಿಗೆ ತಮ್ಮ ಸಮ್ಮತಿಯಿಲ್ಲವೆಂದು ಹೇಳಿ ಕಾಂಗ್ರೆಸ್ಸಿನ ನಿಲುಮೆಯನ್ನು ಇನ್ನೊಮ್ಮೆ ಸ್ಪಷ್ಟೀಕರಿಸಿದ್ದರು.

ಸ್ವಯಂ ಶಾಸನಾಧಿಕಾರವುಳ್ಳ ಪ್ರಾಂತಗಳಿಂದೊಡಗೂಡಿದ ಸಂಯುಕ್ತ ಮಂಡಲವೇ ಕಾಂಗ್ರೆಸ್ಸಿನ ಗುರಿ. ವಿದೇಶ, ಸಂರಕ್ಷಣ, ಮಾರ್ಗ, ಅಂಚೆ, ಹಣಕಾಸು, ಸುಂಕ ಮೊದಲಾದವು ಸಾಮಾನ್ಯ ವಿಷಯಗಳಾಗಿರಬೇಕು. ಜಾತೀಯ ತಳಹದಿಯ ಮೇಲೆ ಪ್ರಾಂತಗಳ ಗುಂಪುಗಳನ್ನು ರಚಿಸುವದು ತಪ್ಪು. ಅದರಲ್ಲಿಯೂ ಸಿಂಧ, ಬಲೂಚಿಸ್ತಾನ, ಗಡಿನಾಡುಗಳಲ್ಲಿ ಮಾತ್ರ ಮುಸ್ಲಿಮರ ಬಹುಮತವಿದೆ. ಪಂಜಾಬ, ಬಂಗಾಲಗಳಲ್ಲಿ ಹಿಂದೂ ಮುಸ್ಲಿಮರ ಸಂಖ್ಯೆಗಳಲ್ಲಿ ಬಹಳ ಅಂತರವಿಲ್ಲ. ಇದಲ್ಲದೆ ಯಾವುದೊಂದು ಪ್ರಾಂತವನ್ನು ಅದರ ಇಚ್ಛೆಗೆ ವಿರುದ್ಧವಾಗಿ ಯಾವುದೊಂದು ಗುಂಪಿನಲ್ಲಿ ಸೇರಿಸುವದು ಸರಿಯಲ್ಲ. ಇನ್ನು ಹಿಂದುಸ್ತಾನದ ಯೂನಿಯನ್ನಿನಲ್ಲಿ ಚಿಕ್ಕ ಪ್ರಮಾಣದ ಸಂಯುಕ್ತ ಘಟನೆಗಳು ತಲೆಯೆತ್ತಿದರೆ ಯೂನಿಯನ್ನು ಕುಸಿದುಬೀಳುವದು.

ಹೀಗೆ ಕಾಂಗ್ರೆಸ್ ನಿಲುಮೆಯನ್ನು ವಿವರಿಸಿದ್ದಲ್ಲದೆ, ಮೂಲಭೂತ ತತ್ವಗಳಲ್ಲಿ ಹಿಂದೀ ಸ್ವಾತಂತ್ರ್ಯದ ಮತ್ತು ಬ್ರಿಟಿಶ ಸೈನ್ಯವನ್ನು ಹಿಂತೆಗೆದುಕೊಳ್ಳುವದರ ಮುದ್ದೆಗಳನ್ನು ಎತ್ತಿಲ್ಲ. ಭಾರತದ ಭವಿತವ್ಯವನ್ನಾಗಲಿ ನಡುಗಾಲ ಸರಕಾರದ ರಚನೆಯನ್ನಾಗಲಿ ಈ ತಳಹದಿಯ ಮೇಲೆ ಮಾತ್ರ ನಾವು ಚರ್ಚಿಸಬಲ್ಲೆವು, ಎಂದೂ ಅಧ್ಯಕ್ಷರು ಸ್ಫುಟಗೊಳಿಸಿದ್ದರು.

ಜಿನ್ನಾ ಸಾಹೇಬರೂ ಯಾವದೇ ವಾಗ್ಬಂಧನ ಕ್ಕೊಳಗಾಗದೆ ಪರಿಷತ್ತಿಗೆ ಬರುವದಕ್ಕೆ ಮಾತ್ರ ತಾವು ಸಿದ್ಧರಿರುವದಾಗಿ ತಿಳಿಸಿದ್ದರು. ಭಾರತ ಮಂತ್ರಿ ಪೆಥಿಕ್ ಲಾರೆನ್ಸರು ಪರಿಷತ್ತಿಗೆ ಬಂದ ಮಾತ್ರಕ್ಕೆ ಯಾವುದೇ ಯೋಜನೆಗೆ ಪಕ್ಷಗಳು ಬದ್ಧವಾದಂತಾಗಲಿಲ್ಲವೆಂದು ಆಶ್ವಾಸನೆ ಕೊಟ್ಟ ನಂತರ ಎರಡೂ ಪಕ್ಷಗಳು ಪರಿಷತ್ತಿನ ಆಮಂತ್ರಣವನ್ನು ಸ್ವೀಕರಿಸಿದವು.

## ವಿಷಯ ಸೂಚಿ

ಪರಿಷತ್ತು ತಾ. ೫ (ಮೇ) ಕ್ಕೆ ಆರಂಭವಾಯಿತು. ಅದರ ಮುಂದೆ ಈ ಕೆಳಗಿನ ವಿಷಯ ಸೂಚಿಯನ್ನು ಇಡಲಾಯಿತು.

೧ ಪ್ರಾಂತೀಯ ಗುಂಪುಗಳು:
- (ಅ) ರಚನೆ;
- (ಬ) ಗುಂಪುಗಳ ಅಧಿಕಾರವಿಷಯಗಳ ನಿರ್ಣಯ;
- (ಕ) ಗುಂಪುಗಳ ರಚನೆಯ ಸ್ವರೂಪ.

೨ ಯೂನಿಯನ್
- (ಅ) ಯೂನಿಯನ್ನಿನ ಅಧಿಕಾರ ವಿಷಯಗಳು
- (ಬ) ಯೂನಿಯನ್ ಸರಕಾರದ ಘಟನೆಯ ಸ್ವರೂಪ;
- (ಕ) ಹಣಕಾಸು

೩ ಘಟನಾ ಸಮಿತಿ
- (ಅ) ರಚನೆ;
- (ಬ) ಕಾರ್ಯಾಧಿಕಾರಿ ಮಂಡಲ:
  - [೧] ಯೂನಿಯನ್ ಸರಕಾರದ್ದು;
  - [೨] ಪ್ರಾಂತಿಕ ಗುಂಪುಗಳದು;
  - [೩] ಪ್ರಾಂತಗಳದು.

## ಮೊದಲ ತುತ್ತಿನಲ್ಲೆ ನೊಣ

ಆದರೆ ಈ ವಿಷಯಸೂಚಿಯನ್ನಿಯ ಚರ್ಚೆ ಮುಂದೆ ಸಾಗಲಿಲ್ಲವೆಂಬುದು ಸ್ಪಷ್ಟವಾಗಿದೆ. ವಸ್ತುತಃ ಚರ್ಚೆ ಮೊದಲನೆ ವಿಷಯಕ್ಕಿಂತ ಮುಂದೆ ಸಾಗಲೇ ಇಲ್ಲ. ಆದ್ದರಿಂದ ಮರುದಿನವೇ (ತಾ. ೬) ಕಾಂಗ್ರೆಸ್ ಅಧ್ಯಕ್ಷರು ಹಿಂದಿನ ದಿನದ ಚರ್ಚೆಯ ವಿಷಯಕ್ಕೆ ಅತೃಪ್ತಿಯನ್ನು ವ್ಯಕ್ತಗೊಳಿಸಿ ಪೆಥಿಕ್ ಲಾರೆನ್ಸರಿಗೆ ಪತ್ರ ಬರೆದುದನ್ನು ನೋಡುತ್ತೇವೆ. ಈ ಪತ್ರದಲ್ಲಿ ಅಜಾದರು, ಮಾತುಕತೆಗಳಲ್ಲಿದ್ದ ಅಸ್ಪಷ್ಟತೆಯ ಬಗ್ಗೆ ಚಿಂತೆಯನ್ನು ಸೂಚಿಸಿದ್ದಲ್ಲದೆ, ಕಾಂಗ್ರೆಸ್ಸು ಒಡಂಬಡಿಕೆಗೆ ಎಷ್ಟೇ ಆತುರವಾಗಿದ್ದರೂ ಮೂಲಭೂತ ವಿಷಯಗಳನ್ನು ಬಲಿಗೊಡಲು ಸಿದ್ಧವಿಲ್ಲವೆಂಬುದನ್ನು ಸ್ಪಷ್ಟಗೊಳಿಸಿದರು. ಹಿಂದುಸ್ತಾನದ ಸ್ವಾತಂತ್ರ್ಯವನ್ನೇ ತಳಹದಿಯನ್ನಾಗಿಟ್ಟುಕೊಂಡು ಚರ್ಚೆ ಸಾಗಿದೆಯೆಂದು ಮಂತ್ರಿತ್ರಯರು ಒಪ್ಪಿದ್ದರು, ಇದಕ್ಕೆ ಆಜಾದರು ಸಂತೋಷ ವ್ಯಕ್ತಗೊಳಿಸಿದರೂ "ಘಟನಾ ಸಮಿತಿ ಹಿಂದುಸ್ತಾನದ ಜನತೆಯ ಇಚ್ಛೆಯ ಪ್ರತೀಕವಾಗಿ"ರುವದಾದ್ದರಿಂದ ಯಾವುದೇ ಪೂರ್ವವ್ಯವಸ್ಥೆಯಿಂದ ಅದು ಬದ್ಧವಾಗಲಾರದೆಂದು ಸೂಚಿಸಿದ್ದರು. ಈ ವಿಷಯವನ್ನು ಚರ್ಚೆಯ ಕಾಲಕ್ಕೆ ಸಾಕಷ್ಟು ಗಮನಿಸಿದಂತೆ ಕಾಣಲಿಲ್ಲವೆಂಬುದು ಅವರ ಆಕ್ಷೇಪವಾಗಿತ್ತು. ಪ್ರಾಂತಗಳನ್ನು ಗುಂಪುಗಳನ್ನಾಗಿ ಕಟ್ಟುವದಕ್ಕೆ ಕಾಂಗ್ರೆಸ್ಸು ವಿರುದ್ಧವಾಗಿದೆಯೆಂದು ಅಝಾದರು ಇನ್ನೊಮ್ಮೆ ಒತ್ತಿ ಹೇಳಿ ಇಂಥ ಉಪ-ಸಂಯುಕ್ತ ರಾಜ್ಯಗಳ ವ್ಯವಸ್ಥೆ ಜಗತ್ತಿನಲ್ಲಿ ಬೇರೆಲ್ಲಿಯೂ ಇಲ್ಲವೆಂದು ತಿಳಿಸಿದ್ದರು. ಹಿಂದುಸ್ತಾನದ ವಿಭಜನೆಯ ಬಗೆಗೂ ಅವರು ಪ್ರಬಲ ವಿರೋಧ ತೋರಿದ್ದರು. ಶಾಸನ ಸಭೆಗಳಲ್ಲಾಗಲೀ ಕಾರ್ಯಕಾರಿ ಮಂಡಲಗಳಲ್ಲಾಗಲಿ ಗುಂಪು ಗುಂಪುಗಳಲ್ಲಿ ಸಮಾನ ಪ್ರಾತಿನಿಧ್ಯವನ್ನೂ ಕಾಂಗ್ರೆಸ್ಸು ಒಪ್ಪುವದಿಲ್ಲವೆಂಬುದನ್ನೂ ಕಟ್ಟುನಿಟ್ಟಾಗಿ ಹೇಳಿ, ಅಂಜಿಕೆ ಸಂಶಯಗಳನ್ನು ಹೊಡೆದು ಹಾಕಲು ಕಾಂಗ್ರೆಸ್ಸಿಗೆ ಇಚ್ಛೆಯಿದ್ದರೂ ಅದು ಪ್ರಜಾತಂತ್ರದ ತತ್ವಗಳಿಗೆ ವ್ಯತಿರಿಕ್ತವಾಗಿರಕೂಡದೆಂದು ಹೇಳಿದ್ದರು.

## ಒಡಂಬಡಿಕೆಯ ಸೂಚನೆಗಳು

ತಾ. ೫—೬ ಕ್ಕೆ ನಡೆದ ಚರ್ಚೆಗಳಿಂದ ಏನೂ ಫಲವಾಗದಿರಲು ತ್ರಿಪಕ್ಷಗಳಲ್ಲಿ ಒಡಂಬಡಿಕೆಗೆ ತಳಹದಿಯೆಂದು ೯ ಮುದ್ದೆಗಳನ್ನು ಭಾರತ ಮಂತ್ರಿಗಳು ಮೇ ೮ ಕ್ಕೆ ಕಾಂಗ್ರೆಸ ಲೀಗಗಳೆರಡರ ಅಧ್ಯಕ್ಷರುಗಳ ಮುಂದೆ ಮಂಡಿಸಿದರು. ಅದನ್ನು ವಿಚಾರ ಮಾಡಿ ನಿರ್ಧರಿಸಲು ಮರುದಿನ ಮಧ್ಯಾಹ್ನ ೩ ಗಂಟೆಯುವರೆಗೂ ಸಮಯವಿತ್ತರು. ಅದರ ಸಾರವನ್ನು ಹೀಗೆ ಸಂಗ್ರಹಿಸಬಹುದು:—

ವಿದೇಶ, ಸಂರಕ್ಷಣ, ಮಾರ್ಗಸೌಕರ್ಯ-ಅಂಚೆ ಮತ್ತು ಮೂಲಭೂತ ಹಕ್ಕುಗಳು ಈ ಅಧಿಕಾರಗಳು ಮತ್ತು ಅದಕ್ಕೆ ಹಣಎತ್ತುವ ಅಧಿಕಾರವುಳ್ಳ ಯೂನಿಯನ್ ಸರ್ಕಾರ; ಉಳಿದ ಅಧಿಕಾರಗಳೆಲ್ಲ ಪ್ರಾಂತಗಳಿಗೆ; ಪ್ರಾಂತಗಳಿಗೆ ಗುಂಪು ಕಟ್ಟಿಕೊಳ್ಳುವ ಅಧಿಕಾರ; ಯೂನಿಯನ್ ಶಾಸನ ಸಭೆಯಲ್ಲಿಯೂ ಕಾರ್ಯಕಾರಿ ಮಂಡಲದಲ್ಲಿಯೂ ಹಿಂದೂ—ಮುಸ್ಲಿಂ ಬಹುಸಂಖ್ಯಾಕ ಪ್ರಾಂತಗಳಿಗೆ ಸಮಾನ ಪ್ರಾತಿನಿಧ್ಯ ಮತ್ತು ಸಂಸ್ಥಾನ ಪ್ರತಿನಿಧಿಗಳಿಗೂ ಪ್ರಾತಿನಿಧ್ಯ; ಹತ್ತು ವರ್ಷಗಳ ನಂತರ ಮತ್ತು ಆ ಮೇಲೆ ಪ್ರತಿ ಹತ್ತು ವರ್ಷಕ್ಕೊಮ್ಮೆ ಯಾವುದೊಂದು ಪ್ರಾಂತದ ಶಾಸನ ಸಭೆಯ ಬಹುಮತದ ನಿರ್ಣಯವಾದರೆ ಘಟನೆಯನ್ನು ಪುನರ್ವಿಮರ್ಶಿಸಬೇಕು; ಅದಕ್ಕಾಗಿ ಮೂಲ ಘಟನಾ ಸಮಿತಿಯ ಮಾದರಿಯಲ್ಲೆ ಅಷ್ಟೇ ಅಧಿಕಾರವುಳ್ಳ ಸಮಿತಿಯ ನೇಮಕವಾಗಬೇಕು; ಘಟನಾ ಸಮಿತಿಗೆ ಆಯಾ ಪ್ರಾಂತಗಳ ಶಾಸನ ಸಭೆಗಳ ಪ್ರತಿ ೧೦ ಸದಸ್ಯರಿಗೊಬ್ಬರ ಪ್ರಮಾಣದಲ್ಲಿ ಆಯ್ಕೆಯಾಗಬೇಕು ಮತ್ತು ಸಂಸ್ಥಾನಗಳಿಗೆ ಜನಸಂಖ್ಯಾ ಪ್ರಮಾಣದಿಂದ ಪ್ರಾತಿನಿಧ್ಯವಿರಬೇಕು; ಘಟನಾ ಸಮಿತಿಯ ಹಿಂದೂ ಪ್ರಾಂತ ಮುಸ್ಲಿಮ ಪ್ರಾಂತ ಮತ್ತು ಸಂಸ್ಥಾನ ಪ್ರತಿನಿಧಿಗಳು ಬೇರೆ ಬೇರೆ ಗುಂಪಾಗಿ ಸಭೆ ಸೇರಿ ಆಯಾ ಪ್ರಾಂತಗಳ ಘಟನೆಯನ್ನು ನಿರ್ಣಯಿಸಬೇಕು; ಇಂಥ ಗುಂಪಿನಿಂದ ಹೊರಗುಳಿಯುವ ಅಧಿಕಾರ ಪ್ರಾಂತಗಳಿಗಿರಬೇಕು; ಇದಾದ ಮೇಲೆ ಮೂರೂ ಗುಂಪುಗಳು ಸೇರಿ ಯೂನಿಯನ್ ಘಟನೆಯನ್ನು ನಿರ್ಣಯಿಸುವವು; ಯಾವುದೊಂದು ಮಹತ್ವದ ಜಾತೀಯ ಪ್ರಶ್ನೆಯ ತೀರ್ಮಾನಕ್ಕೆ ಎರಡೂ ಪ್ರಮುಖ ಜಾತಿಗಳ ಬಹುಸಂಖ್ಯಾಕ ಪ್ರತಿನಿಧಿಗಳ ಅನುಕೂಲ ಮತ ದೊರೆಯಬೇಕು; ವಾಯಿಸರಾಯರು ಘಟನಾ ಸಮಿತಿ ಒಡನೆ ಕರೆಯುವರು.

## ಲೀಗಿನ ಆಕ್ಷೇಪ

ಭಾರತ ಮಂತ್ರಿಗಳ ಈ ಹೊಸ ಸೂಚನೆಗಳಿಗೆ ಜಿನ್ನಾ ಸಾಹೇಬರು ಅದೇ ದಿನ ಉತ್ತರವಿತ್ತರು. ಅದರಲ್ಲಿ ಅವರು ಈಗ ಮಾಡಿದ ಈ ಹೊಸ ಸೂಚನೆಗಳು ತಾ ೨೭ ರ ಆಮಂತ್ರಣ ಪತ್ರದ ಸೂಚನೆಗಳಿಗೆ ತೀರ ಭಿನ್ನವಾಗಿದೆಯೆಂದು ಆಕ್ಷೇಪಿಸಿದ್ದಲ್ಲದೆ, ಯೂನಿಯನ್ ಸರಕಾರ ಮತ್ತು ಪ್ರಾಂತಿಕ ಗುಂಪುಗಳ ಯೋಜನೆಯನ್ನು ಕಾಂಗ್ರೆಸ್ಸು ತಾ. ೫-೬ ರ ಪರಿಷತ್ತಿನಲ್ಲಿ ನಿರಾಕರಿಸಿದ್ದರಿಂದ ಕಾಂಗ್ರೆಸ್ಸು ಬಯಸಿದ ಬದಲಾವಣೆಗಳನ್ನು ಭಾರತ ಮಂತ್ರಿಗಳು ಮಾಡಿ ಹೊಸ ಸೂಚನೆ ಕಳಿಸಿದ್ದಾರೆಂದು ಆರೋಪಿಸಿದರು. ಯೂನಿಯನ್ ಸರಕಾರಕ್ಕೆ ಮೊದಲು ಸೂಚಿಸಿದ ಮೂರು ಅಧಿಕಾರಗಳಲ್ಲದೆ "ಮೂಲಭೂತ ಹಕ್ಕುಗಳು" ಎಂಬ ನಾಲ್ಕನೆ ಅಧಿಕಾರವನ್ನೂ ವೆಚ್ಚಗಳಿಗೆ ಹಣ ಎತ್ತುವ ಅಧಿಕಾರವನ್ನೂ ಕೊಡಲು" ಸೂಚಿಸಲಾಗಿದೆ ಮತ್ತು ಒಂದೇ ಘಟನಾ ಸಮಿತಿಯಿರಬೇಕೆಂದು ಹೇಳಲಾಗಿದೆಯೆಂದೂ ಅವರು ದೂರಿದ್ದರು. ಒಂದೇ ಘಟನಾ ಸಮಿತಿಗೂ ಹೊಸ ಸೂಚನೆಗಳಲ್ಲಿ ಹೇಳಿದ ಅದರ ರಚನಾಪದ್ಧತಿಗೂ ಲೀಗು ಒಪ್ಪಲಾರದೆಂದು ಹೇಳಿ ಈ ವಿಷಯಗಳನ್ನು ಚರ್ಚಿಸುವದರಿಂದ ಏನೂ ಫಲವಿಲ್ಲೆಂದು ಸಾರಿಬಿಟ್ಟರು.

ಮೇ ೯ ಕ್ಕೆ ಪೆಥಿಕ ಲಾರೆನ್ಸರು ಇದಕ್ಕೆ ಉತ್ತರ ಕೊಟ್ಟು ಕಾಂಗ್ರೆಸ್ಸು ಯೂನಿಯನ್ ಯೋಜನೆಯನ್ನು ನಿರಾಕರಿಸಿದ್ದಿಲ್ಲವೆಂದೂ ಮೂಲಭೂತ ಹಕ್ಕು ಮತ್ತು ವೆಚ್ಚದ ಹಣವೆತ್ತುವ ಅಧಿಕಾರವನ್ನು ಯೂನಿಯನ್ನಿಗೆ ಕೊಡಲು ಜಿನ್ನಾರೇ ಪರಿಷತ್ತಿನಲ್ಲಿ ಒಪ್ಪಿದಂತೆ ಅನಿಸಿತ್ತೆಂದೂ ಹೇಳಿದರು. ಪ್ರಾಂತೀಯ ಗುಂಪುಗಳ ಮೂಲ ಯೋಜನೆಯನ್ನು ಬಿಟ್ಟುಕೊಟ್ಟಿಲ್ಲವೆಂದೂ ಗುಂಪುಗಳೇ ಇರಬಾರದೆಂಬ ಕಾಂಗ್ರೆಸ್ ಒತ್ತಾಯಕ್ಕೂ ಅವು ಬೇಕೇಬೇಕೆಂಬ ಲೀಗ್ ಬೇಡಿಕೆಗೂ ಮಧ್ಯಮಾರ್ಗವೆಂದು ಈ ಹೊಸ ಸೂಚನೆಯಲ್ಲಿ ಪ್ರಾಂತಗಳಿಗೆ ಗುಂಪುಗಳಿಂದ ಹೊರಗುಳಿಯುವ ಹಕ್ಕು ಕೊಡಲಾಗಿದೆಯೆಂದೂ ಗುಂಪುಗಳ ಎರಡು ಘಟನಾ ಸಮಿತಿಗಳು ಯೂನಿಯನ್ ಘಟನೆಯನ್ನು ರಚಿಸಲು ಒಂದುಗೂಡಬೇಕೆಂಬ ಅಂಶವನ್ನು ಜಿನ್ನಾ ಅವರೇ ಒಪ್ಪಿದ್ದರೆಂದೂ ಈಗ ಮಾಡಿರುವ ಸೂಚನೆ ಅದಕ್ಕಿಂತ ಬೇರೆ ಆಗಿಲ್ಲವೆಂದೂ ಅವರು ಸ್ಪಷ್ಟಗೊಳಿಸಿದರು.

## ಕಾಂಗ್ರೆಸ್ಸಿನ ಸ್ಪಷ್ಟೋಕ್ತಿ

ಮೇಲಿನ ಹೊಸ ಸೂಚನೆಗಳಿಗೆ ಕಾಂಗ್ರೆಸ್ ಅಧ್ಯಕ್ಷರು ತಾ. ೯ ಕ್ಕೆ ಉತ್ತರವಿತ್ತರು. ಅದರಲ್ಲಿ ಅವರೆತ್ತಿದ ಆಕ್ಷೇಪಗಳನ್ನು ಹೀಗೆ ಸಂಗ್ರಹಿಸಬಹುದು:

ಯೂನಿಯನ್ ಸರಕಾರಕ್ಕೆ ಹಣವೆತ್ತುವ ಅಧಿಕಾರದ ಏರ್ಪಾಟು ಮಾಡುವದಾಗಿ ಬರೆದಿದ್ದರೂ ಅಂಥ ಅಧಿಕಾರ ಅದಕ್ಕಿದ್ದೇ ಇದೆಯೆಂದು ಸ್ಪಷ್ಟಗೊಳಿಸುವದು ಅವಶ್ಯ. ಅಲ್ಲದೆ ಯೂನಿಯನ್ನಿಗೆ ಚಲನ, ಸುಂಕ ಮತ್ತು ಯೋಜನೆಗಳ ಅಧಿಕಾರವಿರಬೇಕು. ಘಟನೆ ಕುಸಿದುಬಿದ್ದರೆ ಅಥವಾ ಕಠಿನ ಪ್ರಸಂಗಗಳಲ್ಲಿ ಅವಶ್ಯಕ ಉಪಾಯ ಕೈಕೊಳ್ಳುವ ಅಧಿಕಾರವೂ ಅದಕ್ಕಿರತಕ್ಕದ್ದು.

ಇಷ್ಟವಿರಲಿ ಇಲ್ಲದಿರಲಿ ಪ್ರಾರಂಭದಲ್ಲಿ ಪ್ರತಿಯೊಂದು ಪ್ರಾಂತವೂ ಯಾವುದೊಂದು ಗುಂಪಿನಲ್ಲಿ ಸೇರಬೇಕೆಂಬ ಒತ್ತಾಯಕ್ಕೆ ಕಾಂಗ್ರೆಸ್ಸು ಒಪ್ಪಲಾರದು. ಪ್ರಬಲ ಯೂನಿಯನ್ ಸರಕಾರವೇ ಕಾಂಗ್ರೆಸ್ಸಿಗೆ ಮಾನ್ಯ.

ಜಾತೀಯ ಸಮಪ್ರಾತಿನಿಧ್ಯಕ್ಕೆ ಕಾಂಗ್ರೆಸ ವಿರೋಧ ಈ ಮತ್ತು ಇಂಥ ಪ್ರಶ್ನೆಗಳ ವಿವಾದ ಉಭಯ ಜಾತಿಗಳಲ್ಲಿ ಬಹುಮತದಿಂದ ಬಗೆಹರಿಯದಿದ್ದರೆ ಪಂಚರ ನಿರ್ಣಯಕ್ಕೆ ಒಪ್ಪಿಸಬಹುದು.

-೬ನೇ ಪುಟ ನೋಡಿರಿ

## ಸಿಮುಲಾ ಪರಿಷತ್ತು ಮುರಿದುದೇಕೆ ?

[ ೫ನೇ ಪುಟದಿಂದ ]

ಹತ್ತು ವರ್ಷಗಳಿಗೊಮ್ಮೆ ಘಟನೆಯ ಪುನರ್ವಿಮರ್ಶೆಗೆ ಒಪ್ಪಿಗೆ. ಆದರೆ ಶಾಸನ ಸಭೆಗಳಿಂದ ಆಯ್ದು ಘಟನಾ ಸಮಿತಿ ರಚಿಸುವದು ಸದ್ಯದ ಪರಿಸ್ಥಿತಿಗಷ್ಟೆ ಯೋಗ್ಯವಿದ್ದು ಮುಂದಿನ ಘಟನಾ ಪುನರ್ವಿಮರ್ಶಕ ಸಮಿತಿಗಳಿಗೆ ಸಾರ್ವತ್ರಿಕ ವಯಸ್ಕ ಮತದಾನದಿಂದಲೇ ಆಯ್ಕೆಯಾಗ ತಕ್ಕದ್ದು.

ಘಟನಾಸಮಿತಿಯ ಆಯ್ಕೆಯ ವಿಚಾರದಲ್ಲಿ ಸಿಂಗಲ್ ಟ್ರಾನ್ಸಫರೇಬಲ್ ಮತದಾನ ಪದ್ಧತಿಯೆ ಎಲ್ಲ ಪಕ್ಷಗಳಿಗೂ ನ್ಯಾಯವಾದದ್ದು. ಶಾಸನ ಸಭೆಗಳಲ್ಲಿಯ ೧೧ಕ್ಕೊಬ್ಬ ಸದಸ್ಯನೆಂದರೆ ಘಟನಾ ಸಮಿತಿ ತೀರ ಚಿಕ್ಕದಾಗುವದಾದುದರಿಂದ ಶಾಸನ ಸಭಾ ಸದಸ್ಯರಲ್ಲಿ ೫ ಜನರಿಗೊಬ್ಬರಂತಾದರೂ ಘಟನಾ ಸಮಿತಿಯಲ್ಲಿರಬೇಕು. ಗುಂಪುಗಳ ರಚನೆ ತಪ್ಪು. ಒಂದು ವೇಳೆ ಅವು ಇದ್ದರೂ ಐಚ್ಛಿಕ ವಾಗಿರತಕ್ಕದ್ದು.

ಈ ವಿಷಯಗಳನ್ನು ಉಲ್ಲೇಖಿಸಿ, ಕೊನೆಯಲ್ಲಿ ಆಝಾದರು ಈ ತಿದ್ದುಪಡಿಗಳಾಗದಿದ್ದಲ್ಲಿ ಹೊಸ ಸೂಚನೆಗಳನ್ನು ಕಾಂಗ್ರೆಸ್ಸು ಅಂಗೀಕರಿಸಲಾರ ದೆಂದೂ ಕಾಂಗ್ರೆಸ್ ಲೀಗುಗಳಲ್ಲಿ ಸಮ್ಮನ್ಯ ಒಡಂಬಡಿಕೆಯಾಗದಿದ್ದರೆ ಕೇಂದ್ರ ಶಾಸನ ಸಭೆಯ ಲೋಕನಿಯುಕ್ತ ಸಭಾಸದರಿಗೆ ಹೊಣೆಗಾರವಾಗಿರುವ ಮಧ್ಯಕಾಲದ ಸರಕಾರವನ್ನು ಕೇಂದ್ರದಲ್ಲಿ ರಚಿಸಿ, ಘಟನೆಯ ವಿಷಯದಲ್ಲಿ ಕಾಂಗ್ರೆಸ-ಲೀಗುಗಳಲ್ಲಿರುವ ವಿವಾದವನ್ನು ಸ್ವತಂತ್ರ ನ್ಯಾಯಮಂಡಲಕ್ಕೊಪ್ಪಿಸಬಹುದೆಂದು ಸೂಚಿಸಿದರು.

ಆ ಮೇಲೆ ಮತಭೇದವನ್ನು ನಿರ್ಣಯಿಸಲು ಮಧ್ಯಸ್ಥರನ್ನಾರಿಸುವ ವಿಚಾರವಲ್ಲಿ ಜಿನ್ನಾ-ನೆಹರು ಇವರಲ್ಲಿ ಮಾತುಕತೆ ನಡೆಯಿತು ಆದರಿಂದ ಏನೂ ಫಲಿಸಲಿಲ್ಲ.

### ಜಿನ್ನಾರ ಕನಿಷ್ಠ ಬೇಡಿಕೆಗಳು

ತಾ. ೧೩ ಕ್ಕೆ ಮುಸ್ಲಿಂ ಲೀಗು ರಾಯಭಾರ ವರಿಗೆ ತನ್ನ ಕನಿಷ್ಠ ಬೇಡಿಕೆಗಳ ಮನವಿಯೊಂದನ್ನು ಒಪ್ಪಿಸಿತು. ಇದರ ಪ್ರತಿಯೊಂದನ್ನು ಕಾಂಗ್ರೆಸ್ಸಿಗೂ ಕಳಿಸಲಾಗಿತ್ತು. ಅದರ ಸಾರ ಹೀಗಿದೆ:

ಅರು ಮುಸ್ಲಿಂ ಪ್ರಾಂತ (ಪಂಜಾಬ, ಸಿಂಧ, ಬಲುಚಿಸ್ತಾನ, ಗಡಿನಾಡು, ಬಂಗಾಲ ಮತ್ತು ಅಸಾಮು) ಸೇರಿಸಿ ಒಂದೇ ಗುಂಪು ಮಾಡಬೇಕು. ವಿದೇಶ, ಸಂರಕ್ಷಣೆ ಮತ್ತು ಸಂರಕ್ಷಣೆಗೆ ಅವಶ್ಯವಿರುವ ಮಾರ್ಗಸೌಕರ್ಯ ಹೊರತು ಬೇರೆ ಎಲ್ಲ ಅಧಿಕಾರ ಅದಕ್ಕೊಪ್ಪಿಸಬೇಕು. ಅದಕ್ಕೆ ಬೇರೆಯೇ ಘಟನಾಸಮಿತಿಯಿದ್ದು ಗುಂಪಿನ ಮತ್ತು ಅದರಲ್ಲಿ ಸೇರುವ ಪ್ರಾಂತಗಳ ಘಟನೆ ಅದೇ ತಯಾರಿಸಬೇಕು ಈ (ಪಾಕಿಸ್ತಾನ) ಘಟನಾ ಸಮಿತಿಯಲ್ಲಿ ಪ್ರತಿ ಪ್ರಾಂತದ ಬೇರೆ ಬೇರೆ ಜಾತಿಗಳಿಗೆ ಸಂಖ್ಯಾನುಗುಣ ಪ್ರಾತಿನಿಧ್ಯವಿರಬೇಕು. ಘಟನೆ ಸಿದ್ಧವಾದ ಮೇಲೆ ಪಾಕಿಸ್ತಾನ ಗುಂಪಿನಿಂದ ಹೊರಗುಳಿಯಲು ಯಾವುದೇ ಪ್ರಾಂತಕ್ಕೆ ಅಧಿಕಾರವಿದೆ. ಆದರೆ ಆ ಇಚ್ಛೆ ಪ್ರಾಂತದ ಜನಮತಗಣನೆಯಿಂದಲೇ ಸಿದ್ಧವಾಗಬೇಕು.

(ಅಖಿಲ ಭಾರತ) ಯೂನಿಯನ್ನಿಗೆ ಶಾಸನಸಭೆ ಬೇಕೋ ಬೇಡವೋ ಎಂಬುದನ್ನು ಸಂಯುಕ್ತ ಘಟನಾ ಸಮಿತಿಗೆ ಬಿಡಬೇಕು. ಯೂನಿಯನ್ನಿನ ವೆಚ್ಚಕ್ಕೆ ಹಣ ಪೂರೈಸುವದನ್ನು ಸಂಯುಕ್ತ ಘಟನಾ ಸಮಿತಿಯೇ ನಿರ್ಣಯಿಸಬೇಕು ಆದರೆ ಯಾವದೇ ಸಂದರ್ಭದಲ್ಲಿ ಯೂನಿಯನ್ನಿಗೆ ಕರ ಎತ್ತುವ ಅಧಿಕಾರವಿರಕೂಡದು. (ಅರ್ಥಾತ್ ವೆಚ್ಚಕ್ಕೆ ಯೂನಿಯನ್ನು ಪ್ರಾಂತಗಳ ಇಲ್ಲವೆ ಜಾತೀಯ ಗುಂಪುಗಳ ಮುಖ ನೋಡಬೇಕು.) ಯೂನಿಯನ್ ಶಾಸನ ಸಭೆ, ಕಾರ್ಯಕಾರಿ ಮಂಡಲಗಳಲ್ಲಿ ಎರಡೂ ಗುಂಪುಗಳಿಗೆ (ಹಿಂದುಸ್ತಾನ ಪಾಕಿಸ್ತಾನ) ಸಮಪ್ರಾತಿನಿಧ್ಯವಿರಬೇಕು. ಯೂನಿಯನ್ ಘಟನಾಸಮಿತಿಯಲ್ಲಿ ಮಹತ್ವದ ಜಾತೀಯ ವಿಷಯಗಳನ್ನು ನಿರ್ಣಯಿಸಬೇಕಾದರೆ ಉಭಯ ಜಾತಿಗಳ

-೧೩ನೇ ಪುಟ ನೋಡಿರಿ

### ಸುದ್ದಿಗಳು

ಶಿವಮೊಗ್ಗಾ ಕರ್ನಾಟಕ ಸಂಘದ ೧೪ ನೇ ವಾರ್ಷಿಕೋತ್ಸವವು ಶ್ರೀ ರಂಗರಾವ ದಿವಾಕರರ ಅಧ್ಯಕ್ಷತೆಯಲ್ಲಿ ತಾ. ೧೮-೧೯ ಎರಡು ದಿನ ಸಾಂಗವಾಯಿತು. ಶ್ರೀ ಮಾಸ್ತಿ ವೆಂಕಟೇಶಯ್ಯಂಗಾರರೂ ವಿಶೇಷ ಅಮಂತ್ರಣ ಮೇರೆಗೆ ಆಗಮಿಸಿದ್ದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಸಾಹಿತ್ಯ ರಾಜಕಾರಣ ಒಂದಕ್ಕೊಂದು ನಿಕಟ ಸಂಬಂಧಿಸಿವೆಯೆಂದೂ ಕನ್ನಡಿಗರೆಲ್ಲ ಒಂದೇ ಎಂಬ ಭಾವನೆಯಿಂದ ಕೆಲಸ ಮಾಡಿದಲ್ಲಿ ಗುರಿ ಸಾಧ್ಯವಾಗದೆ ಹೋಗದೆಂದೂ ಹೇಳಿದರು.

ಕೊಲ್ಹಾಪುರ ಸಂಸ್ಥಾನ ಶಾಸನ ಸಭೆಯ ಆಯವ್ಯಯ ಅಧಿವೇಶನವು ೧ ನೇ ಜುಲೈಯಿಂದ ಪ್ರಾರಂಭವಾಗುವದು.

AC. 73.

# ಮಿಸ್ಟರ್ ಹೂವರ್ ಇವರ ಸಲಹೆ

" ಸಮೀಪದ ಮುಂಬರುವ ದಿನಗಳ ಅಡಚಣೆಯ ಪರಿಸ್ಥಿತಿಯಲ್ಲಿ, ಭಾರತದ ಆಹಾರದ ಕೊರತೆಯುಳ್ಳ ಪ್ರದೇಶಗಳು, ಆಹಾರವನ್ನು ಒದಗಿಸಿಕೊಳ್ಳಲು ಸಾಧ್ಯವಾದಷ್ಟು ಇತರ ಎಲ್ಲಾ ಪ್ರದೇಶಗಳನ್ನು ಆಗ್ರಹಪಡಿಸಬೇಕು— ಆಸ್ಟ್ರೇಲಿಯಾ ಮತ್ತು ಸಯಾಂಗಳಿಂದಷ್ಟೆ ಅಲ್ಲದೆ ಭಾರತದಲ್ಲಿ ಹೆಚ್ಚಿನ ಆಹಾರವಿರುವ ಸ್ಥಳಗಳಿಂದಲೂ, ಮುಂದೆ ತಿರುಗಿ ಕೊಡಲು ಒಪ್ಪಿ ಎರವಾಗಿ ಆಹಾರವನ್ನು ತೆಗೆದುಕೊಳ್ಳಬೇಕು. "

ಅಮೇರಿಕಾದ ಮಾಜಿ ಅಧ್ಯಕ್ಷರಾದ ಮಿಸ್ಟರ್ ಹೂವರರು
ಏಪ್ರಿಲ್ ೨೬ ಕ್ಕೆ ಬೆಂಗಳೂರಿನಲ್ಲಿ ಕೊಟ್ಟ ಹೇಳಿಕೆ.

## ನಮ್ಮ ಪ್ರತಿಜ್ಞೆ ಮತ್ತು ಬಿನ್ನಹ

ಕೊರತೆಯ ಭಾಗಗಳಲ್ಲಿರುವವರಿಗೆ ನಾವು ಸಂಪೂರ್ಣ ಬೆಂಬಲವೀಯುವ ಬಗ್ಗೆ ಪ್ರತಿಜ್ಞೆ ಮಾಡುತ್ತೇವೆ. ದೇಶದ ಯಾವತ್ತೂ ಸಾಧನ ಸಾಮಗ್ರಿಯನ್ನು ಒಂದುಗೂಡಿಸಿ ಅವರಿಗೆ ತ್ವರಿತವಾಗಿ ನೆರವನ್ನು ನೀಡಲಾಗುತ್ತಿದೆ. ಅವರಿಗಿರುವ ಆಹಾರದ ಕೊರತೆಯಲ್ಲಿ ದೇಶದ ಉಳಿದ ಭಾಗವು ಪಾಲು ವಹಿಸುವದಲ್ಲದೆ ಸಮಪಾಲು ವಹಿಸುವದು. ಪ್ರತಿಯೊಬ್ಬನಿಗೆ ಯೋಗ್ಯ ಪ್ರಮಾಣದಲ್ಲಿ ಆಹಾರವು ದೊರೆಯುವಂತೆ ಮಾಡುವದಕ್ಕಾಗಿ ಶೀದಾ ಪದ್ಧತಿಯನ್ನು ವಿಸ್ತರಿಸಲಾಗುತ್ತಿದೆ. ಬೆಲೆ ನಿಯಂತ್ರಣವನ್ನು ತಪ್ಪದೆ ಸಾಗಿಸಲಾಗುವುದು. ಶಾಂತತೆ ಮತ್ತು ಆತ್ಮ ವಿಶ್ವಾಸದಿಂದ ನಡೆದುಕೊಳ್ಳಿರಿ. ನಿಮಗೆ ಅವಶ್ಯವಿರುವದಕ್ಕಿಂತ ಹೆಚ್ಚಿಗೆ ಕೊಂಡುಕೊಳ್ಳಬೇಡಿರಿ. ಲಾಭಬಡಕರೊಡನೆ ಯಾವದೇ ತರದ ಸಂಬಂಧವನ್ನಿಟ್ಟುಕೊಳ್ಳಬೇಡಿರಿ.

ಹೆಚ್ಚುಳಿದ ಭಾಗಗಳಲ್ಲಿರುವವರಿಗೆ ಸಂಪೂರ್ಣ ಸಹಾಯವನ್ನು ಒದಗಿಸಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ. ನಿಮ್ಮಲ್ಲಿ ಹೆಚ್ಚಾಗಿ ಇರುವ ಕಾಳನ್ನು ನೀವು ಕೊಟ್ಟುಬಿಡಬೇಕಾಗಿದ್ದರೂ ನಿಮಗೆ ಸಾಕಷ್ಟು ಕಾಳು ಉಳಿಯುವುದು. ನಿಮ್ಮ ಪಟ್ಟಣದಲ್ಲಿ ಶೀದಾ ಕ್ರಮವನ್ನು ಬಳಿಕೆಯಲ್ಲಿ ತಂದರೆ ನಿಮ್ಮ ದೇಶಬಾಂಧವರಿಗೆ ನೆರವಾಗುವುದಕ್ಕಾಗಿ ಹೀಗೆ ಮಾಡಲಾಗಿದೆಯೆಂದು ನೆನಪಿನಲ್ಲಿಡಿರಿ. ಇಷ್ಟೆಲ್ಲ ಆಗಿಯೂ ನಿಮ್ಮ ಹತ್ತರ ಸಾಕಷ್ಟು ಉಳಿಯುವುದು. ಸ್ವಲ್ಪಾದರೂ ಕೂಡಿಹಾಕಿ ಇಡಬೇಡಿರಿ. ಅಧಿಕಾರಿಗಳೊಡನೆ ಸಹಕರಿಸಿರಿ.

**ಆಹಾರದ ಕೊರತೆಯನ್ನು ಹೋಗಲಾಡಿಸಿರಿ**

**ಹುಮ್ಮಸ್ಸಿನಿಂದ ದುಡಿಯಿರಿ ಎಲ್ಲರೂ ಪಾಲುಗಾರರಾಗಿರಿ.**

## ವ್ಯಾಪಾರಿಗಳಿಗೆ ಮತ್ತು ಬೆಳೆಯುವವರಿಗೆ ಸಂದೇಶ

ನಿಮಗೆ ಶಕ್ಯವಿದ್ದಷ್ಟು ಕಾಳನ್ನೆಲ್ಲ ಹೊರಗೆಡವಿರಿ; ನೀವು ಕೂಡಿಡುವ ಪ್ರತಿಯೊಂದು ಮಣ ಕಾಳು ಒಬ್ಬ ದೇಶಬಾಂಧವನ ಮರಣಕ್ಕೆ ಕಾರಣವಾಗುವುದು. ನಿಯಂತ್ರಿತ ಬೆಲೆಗಳಿಗಷ್ಟೇ ಮಾರಿರಿ-ಅವು ನಿಮಗೆ ಹಾಗೂ ಗ್ರಾಹಕರಿಗೆ ಇಬ್ಬರಿಗೂ ಯೋಗ್ಯವಾಗಿವೆ. ಎರಡನೇಯವರಿಗೆ ದುಃಖ ಕೊಟ್ಟು ಹಣ ಗಳಿಸುವುದು ಪಾಪವೆಂದು ತಿಳಿಯತಕ್ಕದ್ದು.

ಲಾಭಬಡಕರನ್ನು ಮತ್ತು ಕಳ್ಳಪೇಟಿಗಾರರನ್ನು ತಮ್ಮ ಯಾವತ್ತೂ ಶಕ್ತಿಯನ್ನು ಉಪಯೋಗಿಸಿ ಹತ್ತಿಕ್ಕಬೇಕೆಂದು ಸರಕಾರ ಹಾಗೂ ಜನತೆಯು ನಿಶ್ಚಯಿಸಿರುತ್ತದೆ. ಕಳ್ಳಪೇಟಿಯನ್ನು ತಪ್ಪಿಸಿರಿ; ಅದು ಅಪರಾಧವಾಗಿದೆ.

ಹಿಂದುಸ್ಥಾನ ಸರಕಾರದ ಆಹಾರ ಖಾತೆ, ಹೊಸದಿಲ್ಲಿ, ಇವರ ಪ್ರಕಟನೆ

# ಕರ್ಮವೀರ



# ಹರಿಜನ ಪುರವಣಿ

## ನನ್ನ ಪೃಥಕ್ಕರಣ

ಬ್ರಿಟಿಶ ಸರಕಾರದ ಪರವಾಗಿ ಮಂತ್ರಿತ್ರಯ ರಾಯಭಾರದವರೂ ವಾಯಿಸರಾಯರೂ ಪ್ರಕಟಿಸಿರುವ ಸರಕಾರಿ ಪತ್ರವನ್ನು ನಾಲ್ಕು ದಿನ ಸೂಕ್ಷ್ಮವಾಗಿ ಪರಿಶೀಲಿಸಿದ ನಂತರ, ಈಗಿರುವ ಪರಿಸ್ಥಿತಿಯಲ್ಲಿ ಬ್ರಿಟಿಶ ಸರಕಾರದವರು ಉತ್ತಮವಾದ ಲಿಖಿತವನ್ನೇ ಸಿದ್ಧಗೊಳಿಸಿರುವರೆಂಬ ನನ್ನ ಮನವರಿಕೆ ಮತ್ತಷ್ಟು ದೃಢಗೊಂಡಿದೆ. ಆದರಲ್ಲಿ ನಮ್ಮ ದೌರ್ಬಲ್ಯಗಳ—ಅವುಗಳನ್ನು ನಾವು ಕಾಣಬಲ್ಲೆವಾದರೆ-ಪ್ರತಿಬಿಂಬವೇ ಕಾಣುತ್ತದೆ. ಕಾಂಗ್ರೆಸ್ಸೂ ಮುಸ್ಲಿಂ ಲೀಗೂ ಒಮ್ಮತಕ್ಕೆ ಬರಲಿಲ್ಲ, ಬರುವದು ಸಾಧ್ಯವಾಗಲಿಲ್ಲ. ಈ ಸಂದರ್ಭದಲ್ಲಿ ನಮ್ಮಲ್ಲಿಯ ಮತಭೇದಗಳು ಬ್ರಿಟಿಶ ಕೃತಗಳೆಂಬ ಮರುಳು ಸಮಾಧಾನವನ್ನು ಹಚ್ಚಿಕೊಂಡೆವಾದರೆ ನಾವು ಬಹಳ ದೊಡ್ಡ ಪ್ರಮಾದ ಮಾಡಿದಂತಾಗದಿರದು. ಅಷ್ಟು ದೂರ ಇಂಗ್ಲಂಡಿನಿಂದ ಅವುಗಳ ದುರ್ಲಾಭ ಹೊಂದಲೆಂದು ರಾಯಭಾರದವರು ಬಂದಿಲ್ಲ. ಬ್ರಿಟಿಶ ಆಳಿಕೆಯನ್ನು ಕೊನೆಗೊಳಿಸುವ ಅತಿ ಸುಲಭವೂ ಅತಿ ಶೀಘ್ರವೂ ಆದ ಉಪಾಯವನ್ನು ಕಂಡುಹಿಡಿಯಲು ಅವರಿಲ್ಲಿ ಬಂದಿದ್ದಾರೆ. ಅನ್ಯಥಾ ಪ್ರಮಾಣ ದೊರಕುವ ವರೆಗೂ ಅವರ ಪ್ರಕಟ ಘೋಷಣೆಯನ್ನು ನಂಬುವಷ್ಟು ನಾವು ಧೈರ್ಯ ತೋರಬೇಕು. ಮೋಸಗಾರನ ಮೋಸದಿಂದಲೇ ಧೈರ್ಯದ ಗಿಡಕ್ಕೆ ನೀರು ಗೊಬ್ಬರ ಸಿಗುತ್ತದೆ.

ಆದರೆ, ನನ್ನ ಪ್ರಶಂಸೆಯನ್ನು ನೋಡಿ, ಬ್ರಿಟಿಶ ದೃಷ್ಟಿಕೋನದಿಂದ ಅತ್ಯುತ್ತಮವಾದುದು ಹಿಂದೀ ದೃಷ್ಟಿಯಿಂದ ಅಷ್ಟೇ ಉತ್ತಮವೆಂದು ಇಲ್ಲವೆ ಸಾಧಾರಣ ಉತ್ತಮವೆಂದು ಕೂಡ ತಿಳಿದುಕೊಳ್ಳಬೇಕಾಗಿಲ್ಲ. ಅವರಿಗೆ ಅತ್ಯುತ್ತಮವಾದುದು ನಮಗೆ ಅಪಾಯಕರವಾಗಿರಲೂಬಹುದು. ಈ ಕೆಳಗಿನದನ್ನೋದಿದರೆ ನನ್ನ ಮನಸಿನಲ್ಲಿರುವುದು ಸ್ಫುಟವಾದೀತೆಂದು ಆಶಿಸುತ್ತೇನೆ.

ತಮ್ಮ ಮನಸಿನಲ್ಲಿದ್ದುದನ್ನೆಲ್ಲ ಪೂರ್ಣ ಅಂದು ತೋರಿಸಲು ಬ್ರಿ. ಲಿಖಿತದ ಲೇಖಕರು ಹೆಣಗಿದ್ದಾರೆ. ಹಿಂದುಸ್ತಾನದ ಸ್ವಾತಂತ್ರ್ಯದ ತಾಮ್ರಪಟವನ್ನು ಅಣಿಗೊಳಿಸುವ ಕೆಲಸಕ್ಕಾಗಿ ಹಿಂದೀ ಪಕ್ಷಗಳು ಒಂದಾಗಬೇಕಾದರೆ ಅವಶ್ಯವೆಂದು ತಮಗೆ ತೋರಿದ ಕನಿಷ್ಠ ಕರಾರುಗಳನ್ನು ರಾಯಭಾರದವರು ತಾವು ನಡೆಸಿದ ಮಾತುಕತೆಗಳಿಂದ ಕೂಡಹಾಕಿದ್ದಾರೆ. ಬ್ರಿಟಿಶ ಆಳಿಕೆಯನ್ನು ಆದಷ್ಟು ಬೇಗನೆ ಕೊನೆಗೊಳಿಸುವದೇ ಅವರ ಏಕಧ್ಯೇಯ. ತಮ್ಮ ಪ್ರಯತ್ನಗಳಿಂದ ಅದು ಸಾಧ್ಯವಾದರೆ ಹಿಂದುಸ್ತಾನವನ್ನು ಅವಿಭಕ್ತವಾಗಿ, ಯಾದವೀ ಯುದ್ಧದ ಮೇರೆ ಮುಟ್ಟುವಂಥ ಒಳಜಗಳಗಳಿಂದ ಹರಿಹಂಚಾಗಿರದಂಥ ಸ್ಥಿತಿಯಲ್ಲಿ, ಬಿಟ್ಟು ಹೋಗೋಣವೆಂದು ಅವರ ಆಶೆ. ಹೇಗೇ ಇದ್ದರೂ ಅವರು ಹೊರಟು ಹೋಗುವವರೆ. ಸಿಮುಲೆಯಲ್ಲಿ ರಾಯಭಾರದವರು ಎರಡೂ ಪಕ್ಷಗಳನ್ನು ಒಂದೇ ಪರಿಷನ್ಮಂದಿರದಲ್ಲಿ ಕೂಡಿಸಲು ಸಮರ್ಥರಾದರೂ(ಇಷ್ಟು ಮಾಡಬೇಕಾದರೆನೇ ಅವರೆಷ್ಟು ಸಹನೆ ಕೌಶಲಗಳನ್ನು ತೋರಬೇಕಾಯಿತೆಂದು ಅವರೇ ಬಲ್ಲರು) ಆನೆರಡರಲ್ಲಿ ಒಂದು ಒಡಂಬಡಿಕೆಯನ್ನು ಸಾಧಿಸುವದು ಅವರಿಂದಾಗಲಿಲ್ಲ. ಇದರಿಂದ ಎದೆಗುಂದದೆ ಅವರು ಸಿಮುಲೆಯ ಶಿಖರದಿಂದ ಹಿಂದುಸ್ತಾನದ ಬಯಲಿಗಿಳಿದರು, ಮತ್ತು ಬ್ರಿಟಿಶ ನಿಯಂತ್ರಣಕ್ಕೆಗಲಿ ಪ್ರಭಾವಕ್ಕಾಗಲಿ ಒಳಪಡದೆ ಹಿಂದುಸ್ತಾನದ ಸ್ವಾತಂತ್ರ್ಯ ತಾಮ್ರಪಟವನ್ನು ಸಿದ್ಧಗೊಳಿಸುವ ಘಟನಾ ಸಮಿತಿಯನ್ನು ಸ್ಥಾಪಿಸುವ ಹಾದಿ ಸೂಚಿಸಲು ಒಂದು ಉತ್ತಮ ಲಿಖಿತವನ್ನು ಸಿದ್ಧಗೊಳಿಸಿದರು. ಅದೊಂದು ವಿನಂತಿ, ಒಂದು ಸಲಹೆ. ಅದರಲ್ಲಿ ಒತ್ತಾಯವಿಲ್ಲ. ಹೀಗೆ ಪ್ರಾಂತಿಕ ಶಾಸನ ಸಭೆಗಳು ಪ್ರತಿನಿಧಿಗಳನ್ನು ಆರಿಸಬಹುದು, ಬಿಡಬಹುದು. ಪ್ರತಿನಿಧಿಗಳು ಆರಿಸಲ್ಪಟ್ಟವರಾಗಿ ಘಟನಾ ಸಮಿತಿಯಲ್ಲಿ ಸೇರಬಹುದು ಸೇರದಿರಬಹುದು. ಸಮಿತಿ ಕೂಡಿ ರಾಯಭಾರದ ಸಲಹೆಗಳಿಂದ ಬೇರೆಯೆ ಆದ ವಿಧಾನವನ್ನೂ ನಿರ್ಣಯಿಸಬಹುದು. ಯಾನನೊಬ್ಬ ವ್ಯಕ್ತಿಗಾಗಲಿ ಒಂದು ಪಕ್ಷಕ್ಕಾಗಲಿ ಬಂಧಕವಾದುದೇನಾದರೂ ಇದ್ದರೆ ಆ ಬಂಧಕವೆಲ್ಲ ಪರಿಸ್ಥಿತಿಯಿಂದಲೇ ಉದ್ಭೂತವಾದುದು. ಎರಡೂ ದೊಡ್ಡ ಪಕ್ಷಗಳಿಗೆ ಪ್ರತ್ಯೇಕ ಮತದಾನ ಬಂಧಕವಾಗಿದೆಯೇಕೆಂದರೆ ಘಟನಾ ಸಮಿತಿಯ ಅಸ್ತಿತ್ವಕ್ಕೆ ಅದು ಅವಶ್ಯವಾಗಿದೆಯೆಂದು ಹೊರತು ಬೇರಾವ ಕಾರಣದಿಂದಲೂ ಅಲ್ಲ. ಇದನ್ನು ಬರೆಯುತ್ತಿರುವಾಗಲೆ, ರಾಯಭಾರದ ಘೋಷಣೆಯನ್ನು ತೆಗೆದುಕೊಂಡು, ಮತ್ತೊಮ್ಮೆ ಒಂದೊಂದಾಗಿ ಮುದ್ದೆಗಳನ್ನು ಓದಿದ್ದೇನೆ ಮತ್ತು ಅದರಲ್ಲಿ ಕಾಯಿದೆಯ ರೂಪದಲ್ಲಿ ಬಂಧಕವಾಗುವಂತಹದೇನೂ ಇಲ್ಲವೆಂಬ ನಿರ್ಣಯಕ್ಕೆ ಬಂದಿದ್ದೇನೆ.

ಆದರೆ ಆದರಲ್ಲಿ ಬಂಧಕವಾಗಿರುವ ಅಂಶವೆಂದರೆ ಬ್ರಿಟಿಶ ಸರಕಾರವನ್ನು ವಾಗ್ಬದ್ಧ ಮಾಡುವ ಭಾಗ. ಅದುದರಿಂದಲೇ ಇರಬೇಕು, ರಾಯಭಾರದ ನಾಲ್ವರು ಸದಸ್ಯರು ಅದಕ್ಕೆ ಬ್ರಿಟಿಶ ಸರಕಾರದ ಹಾಗು ಪಾರ್ಲಿಮೆಂಟಿನ ಎರಡೂ ಭವನಗಳ ಪೂರ್ಣ ಸಮ್ಮತಿ ಮುದ್ರೆಯನ್ನು ಮುಂದಾಗಿ ದೊರಕಿಸಿಕೊಂಡರು. ರಾಯಭಾರದ ಈ ಘೋಷಣೆ ತ್ಯಾಗದ ಮೊದಲ ಹೆಜ್ಜೆ; ಅದಕ್ಕಾಗಿ ರಾಯಭಾರಕ್ಕೆ ಹೃತ್ಪೂರ್ವಕ ಅಭಿನಂದನೆಗಳು ಸಲ್ಲಬೇಕು. ಪೂರ್ಣ ತ್ಯಾಗಕ್ಕೆ ಇನ್ನೂ ಇಡಬೇಕಾದ ಹೆಜ್ಜೆಗಳಿವೆ; ಅದಕ್ಕಾಗಿ ನಾನು ಇದನ್ನು ವಾಗ್ದಾನ ಪತ್ರ ಅಥವಾ ಪ್ರಾಮಿಸರಿ ನೋಟು ಎಂದು ಕರೆಯುತ್ತೇನೆ

ಇಚ್ಛೆಯಿದ್ದರೇನೇ ಹಿಂದುಸ್ತಾನ ಇದಕ್ಕೆ ಮಾರ್ದನಿ ಕೊಡಬಹುದು. ಆದರೂ ಹಿಂದೀ ಪಕ್ಷಗಳು ಸುಸಂಘಟಿತ ಪಕ್ಷಗಳೆಂದೂ ಹೊಣೆಗಾರ ಸಂಸ್ಥೆಗಳೆಂದೂ ಅವು ಬಲವಂತದ ಕೆಲಸಗಳನ್ನೆಷ್ಟೋ ಅಷ್ಟೇ ಪರಿಪೂರ್ಣವಾಗಿ ಐಚ್ಛಿಕ ಕೆಲಸಗಳನ್ನೂ ಮಾಡಲು ಸಮರ್ಥವಾಗಿವೆಯೆಂದೂ ರಾಯಭಾರದವರು ಸಹಜವಾಗಿ ಇಟ್ಟುಕೊಂಡಿದ್ದಾರೆ. ಅದುದರಿಂದ ಲಾರ್ಡ ಪೆಥಿಕ್ ಲಾರೆನ್ಸರು

“ ಈ ತಳಹದಿಯಲ್ಲಿ ಅವರು ಒಂದೇ ಕಡೆ ಕೂಡಿಯೆ ಬಿಟ್ಟರೆ, ತಳಹದಿಯನ್ನು ಅವರು ಒಪ್ಪಿಕೊಂಡಂತೆಯೆ ಆಯಿತು. ಆದರೂ ಎರಡೂ ಪಕ್ಷಗಳು ಪ್ರತ್ಯೇಕ ಬಹುಮತದಿಂದ ಈ ತಳಹದಿಯನ್ನೇ ಬದಲಿಸಬೇಕೆಂದರೆ ಹಾಗೆಯೂ ಮಾಡಬಹುದು ”

ಎಂದು ಪತ್ರಿಕಾ ಸಂದರ್ಶನದಲ್ಲಿ ಹೇಳಿದ್ದು, ಒಂದು ದೃಷ್ಟಿಯಿಂದ ಸರಿ. ಏಕೆಂದರೆ ಘೋಷಣೆಯ ಕರಾರುಗಳನ್ನು ಚೆನ್ನಾಗಿ ಅರಿತುಕೊಂಡೇ ಪ್ರತಿನಿಧಿಗಳಾಗಿ ಬಂದವರು, ಪ್ರಮುಖ ಪಕ್ಷಗಳೆರಡೂ ಪ್ರತ್ಯೇಕ ಬಹುಮತದಿಂದ ಕ್ರಮಬದ್ಧವಾಗಿ ಆದರ ತಳಹದಿಯನ್ನು ಬದಲಿಸಿದವಿನಾ, ಮೂಲ ತಳಹದಿಯನ್ನೇ ಅನುಸರಿಸಬೇಕೆಂದು ರಾಯಭಾರಿಗಳು ನಿರೀಕ್ಷಿಸುತ್ತಾರೆ. ಇದು ಸಹಜ. ಎರಡೋ ಹೆಚ್ಚೋ ಪ್ರತಿಸ್ಪರ್ಧಿ ಪಕ್ಷಗಳು ಒಂದೆಡೆ ಸೇರುವಾಗ ಅವು ಏನಾದರೊಂದು ಒಡಂಬಡಿಕೆಯಿಂದಲೇ ಸೇರುತಿರುತ್ತವೆ. ಸ್ವಯಂನಿಯುಕ್ತನಾದ ಮಧ್ಯಸ್ಥನು (ಬೇರೆ ಬೇರೆ ಪಕ್ಷಗಳು ಒಬ್ಬನನ್ನು ಮಧ್ಯಸ್ಥನನ್ನಾಗಿ ಆರಿಸದಿರುವಾಗ ರಾಯಭಾರದವರು ತಾವೇ ಸ್ವಯಂನಿಯುಕ್ತ ಮಧ್ಯಸ್ಥರಾಗಿದ್ದಾರೆ), ತಾನು ಕನಿಷ್ಠ ಶರ್ತಗಳನ್ನು ಹಾಕಿ ಒಂದು ಸೂಚನೆಯನ್ನು ಮುಂದಿಟ್ಟರೆ ಮಾತ್ರ ಪಕ್ಷಗಳು ಒಂದೆಡೆ ಕೂಡುವವೆಂದು ಭಾವಿಸಿಕೊಳ್ಳುತ್ತಾನೆ. ಅಂಥ ಸೂಚನೆಯನ್ನು ಮಾಡಿಯೂ ಮಾಡುತ್ತಾನೆ. ಪಕ್ಷಗಳು ಆ ಸೂಚನೆಗೆ ಬೇಕಾದ್ದನ್ನು ಸೇರಿಸಬಹುದು, ತೆಗೆದುಹಾಕಬಹುದು ಅಥವಾ ಆದರ ಮೂಲವನ್ನೇ ಬೇಕಾದರೆ ಬದಲಿಸಬಹುದು.

ಇಲ್ಲಿ ವರೆಗೆ ಎಲ್ಲವೂ ಸರಿಯಾಗಿದೆ. ಆದರೆ ಘಟಕಗಳ ವಿಷಯವೇನು? ಪಂಜಾಬು ಮಾತ್ರ ಹಿಂದುಸ್ತಾನದಲ್ಲಿ ತಮ್ಮ ತಾಯ್ನಾಡೆಂದು ಬಗೆಯುವ ಸೀಖರು ಸಿಂಧ, ಬಲೂಚಿಸ್ತಾನ, ಗಡಿನಾಡುಗಳನ್ನು ಸೇರಿಸಿ ಮಾಡಿದ ಭಾಗಕ್ಕೆ ತಾವು ಸೇರಿದವರೆಂದು, ತಮ್ಮ ಇಚ್ಛೆಗೆ ವಿರುದ್ಧವಾಗಿ, ತಿಳಿದುಕೊಳ್ಳಬೇಕೆ? ಅಥವಾ ಗಡಿನಾಡ ಪ್ರಾಂತ ತನ್ನ ಮನಸಿಗೊಲ್ಲದಿದ್ದರೂ “ಬ” ಎಂದು ಗುರುತಿಸಲಾದ ಪಂಜಾಬದಲ್ಲಿ ಸೇರಿಹೋಗಬೇಕೆ? ಇಲ್ಲವೆ ಆಸಾಮು ಪ್ರಾಂತ ಮುಖ್ಯವಾಗಿ ಮುಸ್ಲಿಮೇತರ ಪ್ರಾಂತವಾಗಿದ್ದರೂ ಮನಸಿಲ್ಲದೆಯೇ “ಕ” ಭಾಗದಲ್ಲಿ ಕೂಡಬೇಕೆ? ನನ್ನ ಅಭಿಪ್ರಾಯದಲ್ಲಿ, ರಾಯಭಾರದ ಘೋಷಣೆಯ ಸ್ವರೂಪ ಐಚ್ಛಿಕವಾಗಿರುವದರಿಂದ ಅಥವಾ ಅದರಲ್ಲಿ ಒತ್ತಾಯದ ಅಂಶವಿಲ್ಲದಿರುವದರಿಂದ ಘಟಕಗಳ ಸ್ವಾತಂತ್ರ್ಯವೂ ಭಂಗವಾಗದಂತಿರಬೇಕು. ಯಾವದೇ ಘಟಕ ಗುಂಪಿನಲ್ಲಿ ಸೇರುವ ಬಿಡುವ ಸ್ವಾತಂತ್ರ್ಯ ಪಡೆದಿರಬೇಕು. ಹೊರಗುಳಿಯುವ ಸ್ವಾತಂತ್ರ್ಯ ಇನ್ನೊಂದು ಸಂರಕ್ಷಣೆಯಾಗಿರಬೇಕು. ಪ್ಯಾರಾ ೧೫(೫) ರಲ್ಲಿ ಹೇಳಲಾದ ಸ್ವಾತಂತ್ರ್ಯವನ್ನು ತೆಗೆದುಕೊಂಡು ಹೊರಗುಳಿಯುವ ಸ್ವಾತಂತ್ರ್ಯವನ್ನು ಕೊಡುವದು ಸಲ್ಲದು. ೧೫ (೫) ಪ್ಯಾರಾ ಹೇಳುತ್ತದೆ:

> “ ಪ್ರಾಂತಗಳಿಗೆ ಗುಂಪುಕಟ್ಟಿಕೊಳ್ಳುವ ಸ್ವಾತಂತ್ರ್ಯವಿರಬೇಕು. ಆಯಾ ಗುಂಪಿಗೆ ಕಾರ್ಯಕಾರಿಗಳೂ ಶಾಸನ ಸಭೆಗಳೂ ಇರಬಹುದು. ಪ್ರತಿ ಗುಂಪೂ ಪ್ರಾಂತಿಕ ಅಧಿಕಾರ ವಿಷಯಗಳಲ್ಲಿ ಯಾವುವನ್ನು ಸಾಮಾನ್ಯ ವಿಷಯಗಳಾಗಿ ನಡೆಸಬೇಕೆಂದು ನಿರ್ಧರಿಸಬಹುದು. ”

ಈ ಸ್ವಾತಂತ್ರ್ಯವನ್ನು ೧೯ ನೇ ಪ್ಯಾರಾದಲ್ಲಿ ಮಾಡಿದ “ ಸೂಚನೆಯ ” ಮುಖಾಂತರ ರಾಯಭಾರಿಗಳು ಕಿತ್ತುಕೊಂಡಿಲ್ಲವೆಂಬುದು ಸ್ಪಷ್ಟವಾಗಿದೆ. ಏಕೆಂದರೆ ಈ ವಿಷಯದಲ್ಲಿ ಏನು ಮಾಡಬಹುದೆಂಬುದನ್ನು ಅದು “ಸೂಚಿಸುತ್ತದೆ ” ಹೊರತು ಆಜ್ಞಾಪಿಸುವದಿಲ್ಲ. ಘಟನಾಸಮಿತಿಯ ಅಧ್ಯಕ್ಷನು ಆದರ ಮೊದಲ ಸಭೆಯಲ್ಲಿ, ಆಯಾ ಪ್ರಾಂತದ ಪ್ರತಿನಿಧಿಗಳು ಗುಂಪಿನ ತತ್ವವನ್ನು ಒಪ್ಪಿಕೊಳ್ಳುವರೋ ಇಲ್ಲವೊ ಎಂಬುದನ್ನೂ ಒಪ್ಪಿಕೊಂಡರೆ ತಮ್ಮ ಪ್ರಾಂತಗಳನ್ನು ವಿಶಿಷ್ಟ ಗುಂಪಿಗೆ ಸೇರಿದ್ದನ್ನು ಒಪ್ಪಿಕೊಳ್ಳುವರೋ ಇಲ್ಲವೊ ಎಂಬುದನ್ನೂ ಕೇಳಿ ತಿಳಿದುಕೊಳ್ಳುವನೆಂದು ಇದಕ್ಕೆ ಅರ್ಥವಾಗುತ್ತದೆ. ಆಗ ಪ್ರತಿಯೊಂದು ಪ್ರಾಂತದಲ್ಲಿ ಮೂಲತಃ ನಿಹಿತವಾದದ್ದು ಮತ್ತು ಪ್ಯಾರಾ ೧೫ರಲ್ಲಿ ಕೊಡಲ್ಪಟ್ಟ ಸ್ವಾತಂತ್ರ್ಯ ಅಕ್ಷುಣ್ಣವಾಗಿ ಉಳಿಯುವದು. ಮೇಲೆ ಹೇಳಿದ ಎರಡು ಪ್ಯಾರಾಗಳಲ್ಲಿರುವ ತೋರಿಕೆಯ ಪೂರ್ವಾಪರವಿರೋಧಕ್ಕೆ ಸಮಾಧಾನ ಹೇಳಲು ನಾನು ಈಗ ವಿವರಿಸಿದ್ದಲ್ಲದೆ ಬೇರೆ ದಿಕ್ಕೇ ಇಲ್ಲವೆಂದು ನನಗೆ ತೋರುತ್ತದೆ. ಇಲ್ಲದಿದ್ದರೆ ಬಲವಂತದ ಈ ಕಲಂಕದಿಂದ ಲಿಖಿತದ ಉದಾತ್ತ ಸ್ವರೂಪವೇ ದೂಷಿತವಾದೀತು. ಆದುದರಿಂದ, ಈ ಗುಂಪಿನ ಸೂಚನೆಯಿಂದಲೂ ವಿಶಿಷ್ಟ ಪ್ರಾಂತವನ್ನು ವಿಶಿಷ್ಟ ಗುಂಪಿಗೆ ಸೇರಿಸುವಲ್ಲಿ ತೋರಿದ ಬಲಾತ್ಕಾರದಿಂದಲೂ ಚಿಂತೆಗೊಳಗಾದವರಿಗೆ ನಾನು ಹೇಳುವದಿದು: ನಾನು ಈಗ ಮಾಡಿರುವ ಅರ್ಥ ಸರಿಯಾಗಿದ್ದರೆ ನಿಮ್ಮ ಚಿಂತೆಗೆ ಎಳ್ಳಷ್ಟೂ ಆಧಾರವಿಲ್ಲ, ಎಂದು.

ನಮ್ಮ ರಾಷ್ಟ್ರ ಅತ್ಯಂತ ಅಲ್ಪಾವಧಿಯಲ್ಲಿ ಸ್ವಾತಂತ್ರ್ಯವನ್ನು ಹೇಗೆ ಗಳಿಸಬಲ್ಲದೆಂದು ದಾರಿ ತೋರುವ ಬರಿ ಸಲಹೆ ಅಥವಾ ಸೂಚನೆ ಇದು, ಎಂಬುದನ್ನು ಮರೆತು ಅವಸರದಿಂದ ಓದುವವರ ತಲೆ ಕರಡು ಮಾಡುವ ಇನ್ನೂ ಎಷ್ಟೋ ವಿಷಯಗಳು ರಾಯಭಾರದ ಘೋಷಣೆಯಲ್ಲಿ ಇವೆ. ಬ್ರಿಟಿಶ ಆತುರದ ಕಾರಣ ಸ್ಪಷ್ಟವೇ ಆಗಿದೆ. ಈಗಿನ ಅವ್ಯವಸ್ಥೆಯ ಗರ್ಭದಿಂದ ತಲೆಯೆತ್ತುವ ಹೊಸ ಜಗತ್ತಿನಲ್ಲಿ ಪರತಂತ್ರ ಹಿಂದುಸ್ತಾನವೆಂದರೆ “ಬ್ರಿಟಿಶ ಕಿರೀಟದಲ್ಲಿನ ಅತ್ಯುಜ್ಜ್ವಲ ರತ್ನ”ವೆಂದು ಪರಿಗಣಿತವಾಗುವ ಬದಲು ಆ ಕಿರೀಟದಲ್ಲಿನ ಅತ್ಯಂತ ಕರಾಳ ಕಲೆಯೆಂದೂ ಕಸದ ಬುಟ್ಟಿಗೆ ಮಾತ್ರ ಯೋಗ್ಯವಾದ ಮಸಿ ತುಣುಕೆಂದೂ ಭಾವಿಸಲ್ಪಡುವದು ನಿಶ್ಚಯ. ಬ್ರಿಟಿಶ ಕಿರೀಟ ಬ್ರಿಟನಿಗೂ ಜಗತ್ತಿಗೂ ಆ ಕಸದ ಬುಟ್ಟಿಗಿಂತ ಹೆಚ್ಚು ಉಪಯುಕ್ತವಾಗಲೆಂದು ನನ್ನೊಡನೆ ಓದುಗರೂ ಆಶಿಸಲಿ, ಪ್ರಾರ್ಥಿಸಲಿ. “ಅತ್ಯುಜ್ವಲ ರತ್ನ”ವೆಂಬ ನುಡಿ ಅಪ್ರಸ್ತುತ ಆತ್ಮಪ್ರಶಂಸೆ. ನಾನು ಹೇಳಿದ ಪ್ರಾಮಿಸರಿ ನೋಟಿನ ವಾಗ್ದಾನವನ್ನು ಪರಿಪೂರ್ಣಗೊಳಿಸಿದಾಗ ಕರ್ತವ್ಯ ಪರಿಪಾಲನೆಯಿಂದ ಉದಿಸಿದ ಅದ್ವಿತೀಯ ರತ್ನವೊಂದು ಬ್ರಿಟಿಶ ಕಿರೀಟದಲ್ಲಿ ಶೋಭಿಸುವದು.

ಈ ಪ್ರಾಮಿಸರಿ ನೋಟಿನ ವಾಗ್ದಾನ ಪರಿಪೂರ್ಣವಾಗಬೇಕಾದರೆ ಈ ಘೋಷಣೆಯಲ್ಲಿಲ್ಲದ ಬೇರೆ ಎಷ್ಟೋ ವಿಷಯಗಳು ಅವಶ್ಯವಾಗಿವೆ. ಆದರೆ ಅವುಗಳ ವಿವೇಚನೆಯನ್ನು “ಹರಿಜನ”ದ ಮುಂದಿನ ಸಂಚಿಕೆಯ ವರೆಗೆ ನಾನು ತಡೆಹಿಡಿಯಬೇಕಾಗಿದೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೨೦—೫—೪೬

## ಇನ್ನೂ ಕೆಟ್ಟ

ಕಳೆದ ವಾರ ನಾನು ಎಲ್ಲೆಡೆಗಳಲ್ಲಿಯೂ ಮಹಿಳೆಯರು ಹರಿಜನ ಬಂಧುಭಗಿನಿಯರ ಕಷ್ಟಗಳನ್ನು ಪರಿಹರಿಸುವ ಪ್ರಯತ್ನದಲ್ಲಿ ತಮ್ಮ ಪೂರ್ಣ ಶಕ್ತಿಯನ್ನು ತೊಡಗಿಸಬೇಕೆಂದು ಪ್ರಾರ್ಥಿಸಿದ್ದೆ. ಹೊಸದಿಲ್ಲಿಯ ರೀಡಿಂಗ್ ರಸ್ತೆಯಲ್ಲಿರುವ ಭಂಗಿ ವಸತಿಗೆ ಭಗಿನೀ ದಲವೊಂದು ಹೋಗಿ ಅಲ್ಲಿನ ನಿವಾಸಿಗಳ ಮುಖ್ಯವಾಗಿ ಹೆಂಗಸರುಮಕ್ಕಳ ಅವಶ್ಯಕತೆಗಳನ್ನು ಬಗೆಹರಿಸಬೇಕೆಂದು ಕೂಡ ಕೇಳಿಕೊಂಡಿದ್ದೆ.

ಅದರ ನಂತರ ಗಾಂಧೀಜಿ ಅಜಮೀರ ಗೇಟಿನಲ್ಲಿರುವ ಭಂಗಿ ವಸತಿಯನ್ನು ಕಾಣಲು ಹೋದರು. ಅವರೊಡನೆ ಹೋದ ಪರಿವಾರದಲ್ಲಿ ನಾನೂ ಒಬ್ಬಳಾಗಿದ್ದೆ. ಹತ್ತು ವರ್ಷ ಕೆಳಗೆ ನಾನು ಮಹಾದೇವ ಭಾಯಿಯೊಡನೆ ಇದೇ ಸ್ಥಳಕ್ಕೆ ಹೋಗಿದ್ದೆ. ಆಗ ಮಹಾದೇವ ಭಾಯಿಯ ಸಮರ್ಥ ಲೇಖನಿ “ಹರಿಜನ”ದಲ್ಲಿ ಈ ವಸತಿಯನ್ನು ಕರುಣಾಪೂರ್ಣವಾಗಿ ಚಿತ್ರಿಸಿತ್ತು. ಈ ದುರ್ದೈವಿ ಮಾನವ ಪ್ರಾಣಿಗಳು ಆ ಹೊಲಸಿನಲ್ಲಿ ಹಂದಿಗಳೊದನೆ ಒಂದೇ ಪಾಡಿನಲ್ಲಿ ಪಾಲುಗಾರರಾಗಿ ಇನ್ನೂ ತೊಳಲಾಡುತಿರುವದನ್ನು ನೋಡುವದು ದುಃಖದಾಯಕವಾಗಿತ್ತು. ಅವರ ದುಃಸಹ ಪರಿಸ್ಥಿತಿಯನ್ನು ನೋಡಿದ ಹೊರತು ನಂಬುವದು ಅಸಾಧ್ಯ. ಈ ಪ್ರದೇಶದ ಆಡಳಿತ ನಡೆಸುವ ಸಮಿತಿಯೂ ಎಂ. ಓ. ಎಚ್. ರೂ ತಮ್ಮ ಕರ್ತವ್ಯವನ್ನು ಪರಿಪೂರ್ಣವಾಗಿ ಪಾಲಿಸಲು ಸಮರ್ಥರಾಗದಿದ್ದರೆ ಅವರನ್ನು ಕೆಲಸದಿಂದ ಬಿಡಿಸುವದೇ ಲೇಸು. ಈ ರೋಗ ಕೇಂದ್ರಗಳನ್ನು ಕುರಿತು ನಿಶ್ಚಿಂತರಾಗಿರುವ ದಿಲ್ಲಿಯ ನಿವಾಸಿಗಳೂ ನಾಚಿಕೆಪಡಬೇಕಾದುದೆ. ಪ್ರತ್ಯಕ್ಷವಾದ ಕೆಡುಕಿನ ವಿರುದ್ಧ ಸಂಘಟಿತ ಸಾರ್ವಜನಿಕ ಚಳವಳಿ ನಡೆಸಿದರೆ ಅದು ಸರ್ವಥಾ ನಿಷ್ಫಲವಾಗಲಾರದು. ನಿಶ್ಚಯವಾಗಿಯೂ ಈಯೊಂದು ವಿಷಯದಲ್ಲಿ ಹಿಂದೀಯರೂ ಯುರೋಪಿಯನ್ನರೂ ಅಂತೆಯೆ ಅಧಿಕಾರಿಗಳೂ ಅಧಿಕಾರೇತರರೂ ಒಂದಾಗಲಡ್ಡಿಯಿಲ್ಲ. ಈ ರೋಗದ ಗುಂಡಿಗಳು, ಸತ್ಯ ಹೇಳಬೇಕಾದರೆ, ಹಿಂದುಸ್ತಾನದ ಎಲ್ಲ ಕಡೆಗಳಲ್ಲಿಯೂ ಇವೆ. ಅವುಗಳ ಇರ್ಕೆಯ ಅಪರಾಧದಲ್ಲಿ ನಮ್ಮೆಲ್ಲರಿಗೂ ಪಾಲು ಇದ್ದೇ ಇದೆ. ಎಲ್ಲೆಡೆಗಳಲ್ಲಿಯೂ ಹರಿಜನ ವಸತಿಗಳನ್ನು ತಮ್ಮ ಮನೆಗಳಷ್ಟೇ ವಾಸಯೋಗ್ಯವಾಗಿ ಮಾಡಿದರೆ ಆಗ ಸ್ತ್ರೀಯರು ತಮ್ಮ ಕರ್ತವ್ಯದಲ್ಲೊಂದು ಅಂಶವನ್ನಾದರೂ ಪೂರೈಸಿದಂತಾದೀತು.

ಅ. ಕೌ.

# ಹಿಂದುಸ್ತಾನಕ್ಕೊಂದು ರಾಷ್ಟ್ರಭಾಷೆ

ಹಿಂದುಸ್ತಾನಕ್ಕೆ ಗಾಂಧೀಜಿ ಎಷ್ಟೋ ವಸ್ತುಗಳನ್ನು ಕೊಟ್ಟಿದ್ದಾರೆ. ಆದರೆ ಹಿಂದುಸ್ತಾನಕ್ಕೆ ಅವರ ಕೈಯಿಂದ ದೊರೆತ ಬಹಳ ದೊಡ್ಡ ಕಾಣಿಕೆಗಳಲ್ಲಿ ರಾಷ್ಟ್ರಭಾಷೆಯೂ ಒಂದೆಂಬ ಮಾತು ಅನೇಕರ ಗಮನಕ್ಕೆ ಬಂದಿರಲಿಕ್ಕಿಲ್ಲ. ಹಿಂದುಸ್ತಾನದಲ್ಲಿ ಅನೇಕ ಭಾಷೆಗಳಿದ್ದರೂ ಅದೊಂದು ತನ್ನದೇ ಆದ ರಾಷ್ಟ್ರಭಾಷೆಯನ್ನು ಇಟ್ಟುಕೊಂಡಿದ್ದಿಲ್ಲ. ಈ ಕೊರತೆಯನ್ನು ಗಾಂಧೀಜಿ ತುಂಬಿ ಕೊಟ್ಟಿದ್ದಾರೆ.

ಇಂಗ್ಲಿಷ ಭಾಷೆ ನಮ್ಮಲ್ಲಿಗೆ ಬಂದುದು ಪ್ರಭುತ್ವದ ಬಾಗಿಲಿಂದ. ಆದರೂ ಬಂದದ್ದೇ ತಡ ಅದು ಇಡೀ ದೇಶವನ್ನೇ ವ್ಯಾಪಿಸಿಬಿಟ್ಟಿತು. ನಮ್ಮ ಪ್ರಾಥಮಿಕ ಮತ್ತು ಉಚ್ಚ ಶಿಕ್ಷಣ ಮತ್ತು ಸಾಮಾಜಿಕ ವ್ಯವಹಾರದ ಭಾಷೆಯ ಸ್ಥಾನವನ್ನು ದೊರಕಿಸಿಕೊಂಡುಬಿಡುವಷ್ಟು ಅದರ ವ್ಯಾಪ ಬೆಳೆಯಿತು. ಓದುಬರಹ ಬಲ್ಲ ಹಿಂದೀಯರು ತಮ್ಮ ದೇಶ ಭಾಷೆಯಲ್ಲಿ ಮಾತಾಡುವದು ನಾಚಿಕೆಗೇಡೆಂದು ತಿಳಿಯತೊಡಗಿದ್ದರು. ಎಲ್ಲ ಸಂದರ್ಭಗಳಲ್ಲಿಯೂ ಇಂಗ್ಲಿಷ ಶಬ್ದಗಳೇ ಬಾಯಿಂದ ಹೊರಬೀಳುತ್ತಿರಬೇಕು. ಅದೇ ಹಿರಿಮೆ, ಅದೇ ಗೌರವ ಎಂಬ ತಿಳಿವಳಿಕೆಯುಂಟಾಗಿತ್ತು. ತಮ್ಮ ಸ್ವಂತದ ಮಾತುಕತೆಗಳಲ್ಲಿ ಕೂಡ ಇಂಗ್ಲೀಷನ್ನು ಸೇರಿಸದಿದ್ದರೆ ಜನರಿಗೆ ಸರಿದೋರುತಿರಲಿಲ್ಲ.

ಕಳೆದ ಶತಮಾನದ ಕೊನೆಯ ಭಾಗದಲ್ಲಿ ದೇಶದಲ್ಲಿ ಹೊಸ ಜಾಗ್ರತಿಯುಂಟಾಗಿ ಹಿಂದೀ ರಾಷ್ಟ್ರೀಯ ಕಾಂಗ್ರೆಸ್ಸು ಸ್ಥಾಪಿತವಾಯಿತು. ಆಗ ಕಾಂಗ್ರೆಸ್ಸಿನ ಅಧಿವೇಶನಗಳು ಮುಖ್ಯವಾಗಿ ದೇಶದ ಬೇಡಿಕೆ ಠರಾವುಗಳ ದನಿ ಜಗತ್ತಿನಲ್ಲೆಲ್ಲ ಕೇಳಿಸಬೇಕೆಂಬ ಉದ್ದೇಶದಿಂದಲೇ ಜರುಗಿಸಲ್ಪಡುತ್ತಿದ್ದವು. ಆದರೆ ಈ ದನಿ ಕೂಡ ಸ್ವಂತ ಭಾಷೆಯಲ್ಲಿ ಏಳುತ್ತಿದ್ದಿಲ್ಲ. ತನ್ನ ದೇಶ ತನಗಾಗಿಯೇ ಇದೆ ಹೊರತು ಬೇರೆಯವರಿಗಲ್ಲ ಎಂದು ಇಂಗ್ಲಂಡಿಗೆ ತಿಳಿಸಬೇಕೆಂದು ಹಿಂದುಸ್ತಾನ ಬಯಸುತ್ತಿತ್ತು. ಆದರೆ ಈ ಮಾತು ಹೇಳಲಿಕ್ಕೂ ಅದಕ್ಕೆ ಸ್ವಂತದ ಹಿಂದುಸ್ತಾನಿ ಭಾಷೆ ಸಿಕ್ಕಿದ್ದಿಲ್ಲ. ಅದು ಬೇರೆಯವರ ಭಾಷೆಯನ್ನೇ ಕೈಗಡ ತೆಗೆದುಕೊಂಡು ತನ್ನ ಕೆಲಸ ಸಾಗಿಸಬೇಕೆಂದು ಆಶಿಸುತ್ತಿತ್ತು.

ಆದರೆ ಗಾಂಧೀಜಿ ಎಂದು ದೇಶದ ರಾಜಕೀಯ ಕ್ಷೇತ್ರದಲ್ಲಿ ಕಾಲಿಟ್ಟರೋ ಅಂದೇ ಆಕಸ್ಮಾತ್ತಾಗಿ ಒಂದು ಹೊಸ ಕ್ರಾಂತಿ ಉಕ್ಕಿ ಬರತೊಡಗಿತು. ಆಗ ದೇಶದ ದನಿ ಸ್ವಂತ ಭಾಷೆಯಲ್ಲಿಯೇ ಕೇಳಿಸತೊಡಗಿತು. ಆ ಮೇಲೆ ದೇಶಭಾಷೆಯಲ್ಲಿ ಮಾತಾಡುವದು ಲಜ್ಜಾಸ್ಪದವೆಂಬ ಭಾವನೆ ಅಳಿದು ಹೋಯಿತು. ನಾವು ನಮ್ಮ ಭಾಷೆಯಲ್ಲಿ ಮಾತನಾಡುವದು ನಾಚಿಕೆಯ ಸಂಗತಿಯಲ್ಲ, ನಮ್ಮ ಭಾಷೆ ಮರೆಯುವದೇ ನಾಚಿಕೆಗೇಡೆಂದು ಅವರು ಜನರ ನೆನಪಿಗೆ ತಂದುಕೊಟ್ಟರು. ಅವರು ೧೯೩೦-೩೧ ರಲ್ಲಿ ಇಡಿ ದೇಶವನ್ನೆ ಸಂಚರಿಸಿದರು. ನೂರಾರು ಭಾಷಣಗಳನ್ನು ಮಾಡಿದರು. ಎಲ್ಲೆಲ್ಲಿಯೂ ಅವರ ಭಾಷಣದ ಭಾಷೆ ಹಿಂದುಸ್ತಾನಿಯೇ ಆಗಿತ್ತು.

ಮೊದಲನೆ ಮಹಾಯುದ್ಧದ ಕಾಲದಲ್ಲಿ ನಾನು ರಾಂಚಿಯ ಸೆರೆಮನೆಯಲ್ಲಿದ್ದಾಗ ಲಾರ್ಡ ಚೆಮ್ಸಫರ್ಡರು ೧೯೧೮ ರಲ್ಲಿ ಹೊಸದಿಲ್ಲಿಯಲ್ಲಿ ಕರೆದಿದ್ದ ಪರಿಷತ್ತಿನ ಸುದ್ದಿಯನ್ನು ಓದಿದ್ದು ನೆನಪಿನಲ್ಲಿದೆ. ಗಾಂಧೀಜಿ ಅದರಲ್ಲಿ ಭಾಗವಹಿಸಿದ್ದರು. ಆದರೆ ಅಲ್ಲಿ ತಾವು ಭಾಷಣವನ್ನು ಹಿಂದುಸ್ತಾನಿಯಲ್ಲಿಯೇ ಮಾಡುವದಾಗಿ ಖಂಡಿತ ಶರ್ತ ಹಾಕಿದ್ದರು. ಆ ಸಮಯದಲ್ಲಿ ಇದೊಂದು ಹೊಸ ವಿಚಿತ್ರ ಸಂಗತಿಯೆಂದು ಪತ್ರಿಕೆಗಳು ತಿಳಿದುಕೊಂಡಿದ್ದವು. ಆದರೆ ಈ ಹೊಸ ಸಂಗತಿ ಬಹಳ ಬೇಗನೆ ದೇಶದಲ್ಲೆಲ್ಲ ಸಾಧಾರಣವಾದ ಸಂಗತಿಯಾಗಲಿತ್ತು. ಪರಿಣಾಮತಃ ೨೫ ವರ್ಷ ಹಿಂದೆ ಯಾವುದು ಇಂಗ್ಲಿಷ ಭಾಷೆಯ ಸ್ಥಾನವೆಂದು ಎಣಿಸಲ್ಪಡುತಿತ್ತೋ ಅದನ್ನಿಂದು ಹಿಂದುಸ್ತಾನಿ ಭಾಷೆ ಸೆಳೆದುಕೊಂಡಿರುವದನ್ನು ಕಾಣುತ್ತೇವೆ.

ಅಬುಲಕಲಮ ಆಝಾದ

ಮೇಲಿನದು "ಹರಿಜನ"ದ ಹಿಂದುಸ್ತಾನಿ ಸಂಸ್ಕರಣದಲ್ಲಿ ಮೌಲಾನಾ ಸಾಹೇಬರು ಬರೆದ ಲೇಖದ ಅನುವಾದ. ಈ ಬರೆಹ ನನ್ನ ಪ್ರಸಂಶೆಗಾಗಿ ಬರೆದುದಲ್ಲ. ಯಾವನು ತನ್ನ ಧರ್ಮವೆಂದು ಬಗೆದು ಏನಾದರೂ ಮಾಡುವನೋ ಅವನಿಗೆ ಪ್ರಶಂಸೆಯಿಂದೇನು? ಮೌಲಾನಾ ಸಾಹೇಬರು ವಿದ್ವಾಂಸರು. ಫಾರಸೀ ಮತ್ತು ಅರಬೀ ಭಾಷೆಯ ಜ್ಞಾನ ಚನ್ನಾಗಿ ಉಳ್ಳವರು. ಆದುದರಿಂದಲೇ ಉರ್ದುವನ್ನು ಚನ್ನಾಗಿ ಅರಿತಿದ್ದಾರೆ. ಆದರೆ ಅರಬೀ ಫಾರಸೀ ಮಯವಾದ ಉರ್ದುವಾಗಲಿ ಸಂಸ್ಕೃತಮಯ ಹಿಂದಿಯಾಗಲಿ ಹಿಂದುಸ್ತಾನದ ಪ್ರಚಲಿತ ಭಾಷೆಯಾಗಲಾರದೆಂದು ಅವರಿಗೆ ಗೊತ್ತು. ಆದುದರಿಂದ ಅವರು ಉರ್ದೂ ಹಿಂದೀಗಳ ಸಮ್ಮಿಶ್ರಣವಾಗಬೇಕೆಂದು ಬಯಸಿ ಎರಡನ್ನೂ ಸೇರಿಸಿಯೆ ಮಾತಾಡುತ್ತಾರೆ. ಹರಿಜನ ಸೇವಕ (ಹಿಂದುಸ್ತಾನಿ ಹರಿಜನ) ದ ಓದುಗರಿಗೆ ಹಿಂದುಸ್ತಾನಿಯ ಮಾದರಿಯೆಂದು ಪ್ರತಿವಾರವೂ ಒಂದೊಂದು ಚಿಕ್ಕ ಲೇಖವನ್ನು ಬರೆದು ಕೊಡಬೇಕೆಂದು ನಾನು ಮೌಲಾನಾ ಸಾಹೇಬರನ್ನು ಕೇಳಿಕೊಂಡಿದ್ದೇನೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೨೧--೪--೪೬

# ಓರ್ವ ಹರಿಜನನ ಪತ್ರ

ಭಂಗಿ ಜನರ ಸಂಪಿನ ಬಗ್ಗೆ ನಾನು ಬರೆದ ಲೇಖದ ಬಗ್ಗೆ ಓರ್ವ ಹರಿಜನ ಮಿತ್ರನು ರೊಚ್ಚಿನಿಂದ ತಕರಾರು ಮಾಡಿದ್ದಾನೆ.

ಅವನ ಮೊದಲನೆ ತಕರಾರೆಂದರೆ "ಹರಿಜನ" ಎಂಬ ಸವಿ ಹೆಸರನ್ನು ಬಿಟ್ಟುಕೊಟ್ಟು "ಭಂಗಿ" ಎಂಬ ಶಬ್ದವನ್ನು ನಾನು ಉಪಯೋಗಿಸುತ್ತಿರುವೆನೆಂದು. ಈ ಪತ್ರ ಬರೆದವನು ಎಷ್ಟು ಶೀಘ್ರವೇದಿಯಿರುವನೆಂಬದು ಈ ಟೀಕೆಯಿಂದ ವ್ಯಕ್ತವಾಗುತ್ತದೆ. ಮೊಟ್ಟ ಮೊದಲು "ಹರಿಜನ" ಎಂಬ ಶಬ್ದವನ್ನು ನನಗೆ ಸೂಚಿಸಿದವನು ಒಬ್ಬ ಗುಜರಾತಿ ಅಸ್ಪೃಶ್ಯ. ಇದಕ್ಕೆ ನಾನು ಸಂತೋಷದಿಂದ ಒಪ್ಪಿಗೆಯಿತ್ತೆ. ಯಾವದಾದರೊಂದು ಉಪಜಾತಿಯ ಪ್ರಚಲಿತ ಹೆಸರನ್ನು ಪಯೋಗಿಸಬಾರದೆಂದು ಇದರಿಂದ ಅರ್ಥವಾಗುವದಿಲ್ಲ. ನಾನೊಬ್ಬ ಹರಿಜನನೆಂದು ಗ್ರಹಿಸಿದ್ದೇನೆ. ಹರಿಜನರಲ್ಲಿ ಭಂಗಿಗಳದೇ ಕೆಳಜಾತಿಯಾಗಿರುವದರಿಂದ ಭಂಗಿ ಎಂದೆನಿಸಿಕೊಳ್ಳಲು ನನಗೆ ಆನಂದವಾಗುತ್ತದೆ. ದಿಲ್ಲಿಯಲ್ಲಿ ಭಂಗಿಗಳ ವಸತಿಯಲ್ಲಿ ನಾನು ವಾಸಿಸುತಿದ್ದಾಗ "ಭಂಗಿ" ಎಂಬ ಶಬ್ದದ ಬಗ್ಗೆ ಅವರೂ ತಕರಾರು ಮಾಡಿದರು.. ಅಲ್ಲದೆ "ಮೆಹತಾರ" ಎಂಬ ಶಬ್ದವನ್ನು ಅವರು ಸೂಚಿಸಿದರು. ಒಂದೇ ವೃತ್ತಿಯನ್ನು ಯಾವ ಪ್ರಚಲಿತ ಶಬ್ದದಿಂದ ಕರೆದರೂ ಅಷ್ಟೆ ಎಂದು ಅವರಿಗೆ ತಿಳಿಹೇಳಲು ನಾನು ಪ್ರಯತ್ನಿಸಿದೆ. ಈ ವೃತ್ತಿಯು ಕೀಳಾಗಿದ್ದರೂ ಆರೋಗ್ಯವನ್ನು ಕಾಪಾಡುವದರಿಂದ ಅದು ಎಲ್ಲಕ್ಕಿಂತಲೂ ಹೆಚ್ಚಿನದಾಗುವದು. ಇದಕ್ಕೆ ಯಾವ ಹೆಸರಿದ್ದರೇನು? "ಭಂಗಿ" ಶಬ್ದದ ಮೂಲವೇನೇ ಇದ್ದರೂ ಅದು ಶಿವ ಎಂಬದರ ರೂಪಾಂತರವಿರಬೇಕೆಂದು ನನಗನಿಸುತ್ತದೆ. ಓರ್ವ ಭಂಗಿಯನ್ನು ನೀವು "ಮೆಹತಾರ" ಅಥವಾ "ಭಂಗಿ" ಎಂದು ಯಾವ ಹೆಸರಿನಲ್ಲಿ ಕರೆದರೂ ಅವನು ಶಿವನಂತೆ ಮನುಷ್ಯನಿಗೆ ಆರೋಗ್ಯ ಕೊಡುತ್ತಾನೆ. ಒಬ್ಬನು ಮನೆಯನ್ನು ನಿರ್ಮಲಗೊಳಿಸುತ್ತಾನೆ. ಇನ್ನೊಬ್ಬನು ಮನಸ್ಸನ್ನು ನಿರ್ಮಲ ಮಾಡುತ್ತಾನೆ.

ಎರಡನೆ ಟೀಕೆಯು ಅತಿ ಕಟುವಾಗಿದೆ. ದುರಭಿಮಾನವು ತಪ್ಪುತಿಳುವಳಿಕೆಗೆ ಕಾರಣವಾಗುತ್ತದೆ. ಒಂದು ವೇಳೆ ನಮ್ಮ ಹಕ್ಕನ್ನು ನಾವು ಬಲದಿಂದ ಪ್ರಸ್ಥಾಪಿಸಿದರೂ ಅದರಿಂದ ಜಗಳವುಂಟಾಗುವ ಸಂಭವವಿದೆ. ಬಲವಂತದಿಂದ ಪಡೆದುದನ್ನು ಜೀರ್ಣಿಸಲು ನಮ್ಮಲ್ಲಿ ಸಾಮರ್ಥ್ಯವಿರದಿರಬಹುದು. ಮುಷ್ಕರಗಾರರು ಒತ್ತಾಯದಿಂದ ತಮಗೆ ಬೇಕಾಗಿದ್ದನ್ನು ಪಡೆದರು. ಹೀಗೆಂದು ನನ್ನ ನಂಬಿಕೆ. ಪಾಯಖಾನೆಗಳನ್ನು ಬಳಿಯುವದೇ ನನ್ನ ವೃತ್ತಿಯಾಗಿರುವಾಗ ನಾನು ಆ ಕೆಲಸ ಮಾಡಲು ನಿರಾಕರಿಸಿದರೆ ಅದನ್ನು ಒತ್ತಾಯವೆಂದು ಕರೆಯಬೇಕಲ್ಲದೆ ಮತ್ತೇನು? ಆ ಕೆಲಸವು ನನಗೆ ಬಂಧನಕಾರಿಯಾಗುವದಿಲ್ಲೆಂಬದು ನಿಜ. ನನ್ನ ಕರಾರುಗಳನ್ನು ಮುಂಡಿಸಲು ನನಗೆ ಹಕ್ಕಿದೆಯೆಂದೂ ಹೇಳಬಹುದು. ಆದರೆ ನನ್ನ ವಿಚಾರಸರಣಿಯ ಪ್ರಕಾರ ಕರಾರುಗಳನ್ನು ಮುಂಡಿಸುವದು ಯಾರೊಬ್ಬರ ನಿರಂಕುಶ ಹಕ್ಕಲ್ಲ. ಇಂಥ ನಿರಂಕುಶ ಹಕ್ಕಿಗೆ ಮನ್ನಣೆ ದೊರೆತಾಗಲೂ ಅದನ್ನು ನಿರ್ದಿಷ್ಟ ಪರಿಸ್ಥಿತಿಯಲ್ಲಿ ಉಪಯೋಗಿಸುವದು ಯೋಗ್ಯವಾಗದಿರಬಹುದು. ಈ ವಾದಸರಣಿಯನ್ನು ನಾನು ಸಮರ್ಥಿಸಲಿಷ್ಟಪಡುವದಿಲ್ಲ. ಭಂಗಿಗಳ ಹಾಗು ನಾಗರಿಕರ ಕರ್ತವ್ಯಗಳೇನೆಂಬದನ್ನು ವಿವರಿಸಲು ನಾನು ನನ್ನ ಲೇಖದಲ್ಲಿ ಪ್ರಯತ್ನಿಸಿದೆ. ಭಂಗಿಗಳಿಗೆ ಎಲ್ಲ ಬಗೆಯಿಂದಲೂ ಅನ್ಯಾಯವಾಗುತ್ತಿದೆಯೆಂದು ನಾನು ಮೇಲಿಂದ ಮೇಲೆ ಹೇಳುತ್ತ ಬಂದಿದ್ದೇನೆ ನಾಗರಿಕರಾದರೂ ತಮ್ಮ ಕರ್ತವ್ಯಗಳನ್ನು ಸರಿಯಾಗಿ ಪಾಲಿಸುತ್ತಿಲ್ಲವೆಂದು ನನಗೆ ಖಚಿತವಾಗಿದೆ. ಹರಿಜನರ ವಸತಿಗಳನ್ನು ಸರಿಯಾಗಿ ಕಟ್ಟಿಸಿ ಕೊಡುವದು, ಅವರ ಉಪಕರಣಗಳು ಚೊಕ್ಕವಾಗುವಂತೆ ನೋಡಿಕೊಳ್ಳುವದು, ವಿಶಿಷ್ಟ ಸಮವಸ್ತ್ರಗಳನ್ನು ದೊರಕಿಸಿಕೊಡುವದು, ಅವರ ಮಕ್ಕಳಿಗೆ ಶಿಕ್ಷಣದ ವ್ಯವಸ್ಥೆ ಮಾಡುವದು ಇವೇ ಮೊದಲಾದವು ನಾಗರಿಕರ ಕರ್ತವ್ಯಗಳಾಗಿವೆ. ಈ ಸಮಸ್ಯೆಗಳು ಕೂಡಲೇ ಬಗೆಹರಿಯಬೇಕು. ಸೌಕರ್ಯಗಳಿರದಿದ್ದರೆ ಭಂಗಿಗಳೇನೂ ಸಂಪು ಹೂಡಲಿಕ್ಕಿಲ್ಲ. ಆದರೆ ಅವರ ಪರವಾಗಿ ನಾಗರಿಕರೇ ಇವುಗಳ ಬಗ್ಗೆ ಹೋರಾಡಬೇಕಾಗಿದೆ.

ಮಿಲಿಟರಿಯವರನ್ನು ಭಂಗಿ ಕೆಲಸಕ್ಕೆ ಹಚ್ಚಬೇಕೆಂಬ ನನ್ನ ಸೂಚನೆಯನ್ನು ಟೀಕಿಸಲಾಗಿದೆ. ನನ್ನ ಸೂಚನೆಯಲ್ಲಿ ಏನೂ ತಪ್ಪಿಲ್ಲವೆಂದು ನನಗನಿಸುತ್ತದೆ. ನನ್ನ ಲೇಖನವನ್ನು ನಾನು ಇನ್ನೊಮ್ಮೆ ಓದಿದ್ದೇನೆ. ಅದರೊಳಗಿನ ಒಂದು ಶಬ್ದವನ್ನಾದರೂ ಹಿಂತೆಗೆದುಕೊಳ್ಳಲು ನಾನು ಸಿದ್ಧನಿಲ್ಲ. ಅದನ್ನು ಬರೆದಿದ್ದಕ್ಕೆ ನಾನು ವಿಷಾದಪಡುವದಿಲ್ಲ ಅದನ್ನು ಯೋಗ್ಯ ಮನಸ್ಸಿನಿಂದ ಇನ್ನೊಮ್ಮೆ ಓದಲು ಹರಿಜನ ಮಿತ್ರರನ್ನು ನಾನು ಕೇಳಿಕೊಳ್ಳುತ್ತೇನೆ. ಅವರು ಹಾಗೆ ಮಾಡಿದರೆಂದರೆ ಅವರ ಬಗ್ಗೆ ನನ್ನಲ್ಲಿರುವ ಭಾವನೆಗಳಲ್ಲಿ ಸ್ವಲ್ಪವೂ ವ್ಯತ್ಯಾಸವಾಗಿಲ್ಲವೆಂಬದು ಅವರಿಗೇ ಗೊತ್ತಾಗುವದು.

ಸಿಮುಲಾ — ಮೋ. ಕ. ಗಾಂ.

೫—೫—೪೬ (ಹರಿಜನ ಬಂಧುವಿನಿಂದ)

# ಮುಂಬಯಿಯಲ್ಲಿ ಖಾದಿ ವಿಜ್ಞಾನ ಶಾಲೆ

ಒಮ್ಮೆ ಮನಸ್ಸಿಗೆ ಸರಿಯೆಂದು ಮನವರಿಕೆಯಾಯಿತೆಂದರೆ ಅದನ್ನು ಆಚರಣೆಯಲ್ಲಿ ತರಲು ಸಾಧ್ಯವಿದ್ದ ಎಲ್ಲ ಪ್ರಯತ್ನ ಮಾಡುವವರಲ್ಲಿ ಶ್ರೀ ವಿಠ್ಠಲದಾಸ ಜೆರಾಜನಿಯವರೂ ಒಬ್ಬರಿರುವರು. ನಾನು ೨೦ ವರ್ಷ ಪರದೇಶದಲ್ಲಿ ವಾಸ ಮಾಡಿ ದಕ್ಷಿಣ ಆಫ್ರಿಕೆಯಿಂದ ೧೯೧೫ ರಲ್ಲಿ ಸ್ವದೇಶಕ್ಕೆ ಮರಳಿದಾಗ ಅವರು ಮುಂಬಯಿಯಲ್ಲಿ ದೊಡ್ಡದೊಂದು ಸ್ವದೇಶಿ ಭಾಂಡಾರ ತೆರೆದು ಅದನ್ನು ಸಾಗಿಸಿಕೊಂಡು ನಡೆದಿದ್ದರು. ನಾನು ಅವರಿಗೆ ನೀವು ಈಗ ವ್ಯಾಪಾರ ನಡೆಸಿರುವ ವಸ್ತುಗಳು ಕೇವಲ ಹೆಸರಿಗೆ ಸ್ವದೇಶಿಯಾಗಿರುವವೆಂದು ತಿಳಿಸಿದೆನು. ತಾವು ಭ್ರಮೆಯಲ್ಲಿದ್ದುದನ್ನು ಅರಿತುಕೊಳ್ಳಲು ಅವರಿಗೆ ಕಠಿಣ ಹೋಗಲಿಲ್ಲ. ಆದರೆ ಮುಂದೇನು ಮಾಡಬೇಕೆಂಬುದು ಅವರಿಗೆ ತೋಚದಾಯಿತು. ನಾನೂ ಅವರಿಗೆ ಲೋಪದ ಹೊರತಾಗಿ ನೇರವಾಗಿ ವ್ಯಾವಹಾರಿಕ ಮಾರ್ಗ ದರ್ಶನ ಕೊಡಲು ಶಕ್ತನಾಗಲಿಲ್ಲ. ಆದರೆ ನಾನು ನಂಬಿದ್ದನ್ನು ಆಚರಣೆಯಲ್ಲಿ ತರುವ ಪ್ರಯತ್ನ ಮಾಡದೆ ಕುಳಿತುಕೊಳ್ಳಲಿಲ್ಲ. ಬೇಗನೆ ನಾನು ಖಾದಿ ನಿರ್ಮಾಣದಲ್ಲಿ ಹೃತ್ಪೂರ್ವಕವಾಗಿ ತೊಡಗಿದೆನು ಮತ್ತು ಶ್ರೀ. ವಿಠ್ಠಲದಾಸರು ಖಾದಿ ಮಾರುವ ವ್ಯವಹಾರ ಪ್ರಾರಂಭಿಸಿದರು. ಆಗ ಉತ್ಪತ್ತಿ ಪ್ರದೇಶಗಳಲ್ಲಿ ಖಾದಿಧಾರಕರ ಸಂಖ್ಯೆ ಬೊಟ್ಟಿನಿಂದ ಎಣಿಸುವಷ್ಟು ಇತ್ತು. ಕ್ರಮೇಣ ಖಾದಿ ಉದ್ಯೋಗ ಬೆಳೆಯುತ್ತ ನಡೆಯಿತು ಅದರ ಇತಿಹಾಸವು ಮನರಂಜಕವಾಗಿದ್ದು ಅದನ್ನು ಇಲ್ಲಿ ಹೇಳುವದು ಅಪ್ರಸ್ತುತವಾಗುವದು.

ಖಾದಿಯನ್ನು ಕೇವಲ ಮಾರಾಟ ವಸ್ತುವನ್ನಾಗಿ ಗಣಿಸಿರುವದು ತಪ್ಪಾಗಿರುವದೆಂದು ಈಗ ಮನವರಿಕೆಯಾದ್ದರಿಂದ ಶ್ರೀ ವಿಠ್ಠಲದಾಸರು ಮತ್ತೊಂದು ಹೆಜ್ಜೆ ಕೈಕೊಂಡಿದ್ದಾರೆ. ಅವರು ನನಗೆ ಗುಜರಾತಿ ಪತ್ರ ಬರೆದು ಅದರ ವಿವರ ತಿಳಿಸಿದ್ದು ಅದರ ಸಾರಾಂಶ ಇಲ್ಲಿ ಕೊಡಲಾಗಿದೆ. "ಮುಂಬಯಿಯಲ್ಲಿಯ ಮೊದಲಿನ ೪ ಖಾದಿ ಭಾಂಡಾರಗಳಲ್ಲಿ ಎರಡು ಭಾಂಡಾರಗಳು ಕಲಿಸುವ ಕೇಂದ್ರಗಳಾಗಿ ಮಾರ್ಪಡಿಸಲ್ಪಟ್ಟಿದ್ದನ್ನು ನಾನು ನಿಮಗೆ ಮೊದಲೇ ತಿಳಿಸಿದ್ದೇನೆ. ಅಲ್ಲಿ ಕಿಡಿಕೆಗಳಲ್ಲಿ ಮಾರಾಟದ ಉದ್ದೇಶದಿಂದ ಆಕರ್ಷಕ ಖಾದಿ ಇಡುವದನ್ನು ಬಿಟ್ಟು ಖಾದಿ ನಿರ್ಮಾಣದಲ್ಲಿ ಅರಳಿ ಮೊದಲು ಮಾಡಿ ನೂಲಿನ ವರೆಗೆ ಬೇಕಾಗುವ ಉಪಕರಣಗಳನ್ನು ಜನರಿಗೆ ನೋಡಲು ಇಡಲಾಗಿದೆ. ಅವುಗಳನ್ನು ನೋಡಿ ವ್ಯಾವಹಾರಿಕ ಜ್ಞಾನ ಸಂಪಾದಿಸಬಯಸುವವರು ಒಳಗೆ ಬರುವರು ಮತ್ತು ಅವರು ಇಚ್ಛಿಸಿದಲ್ಲಿ ಅವರಿಗೆ ಶಿಕ್ಷಣ ಕೊಡಲಾಗುವದು. ಈ ವರೆಗೆ ೨೧೯ ವಿದ್ಯಾರ್ಥಿಗಳು ಸೇರಿದ್ದು ಎಲ್ಲ ವಿಧಾನಗಳನ್ನು ಕಲಿಯ ಬಯಸುವವರ ಸಂಖ್ಯೆ ಸಾಧಾರಣ ನೆಟ್ಟಗಿದೆ. ಶ್ರೀ ಕಾಕುಭಾಯಿಯವರು ಈ ಕೆಲಸವನ್ನು ಕಳಕಳಿಯಿಂದ ಕೈಕೊಂಡಿದ್ದು ಆದರಲ್ಲಿಯೆ ಅವರು ತಮ್ಮ ಎಲ್ಲ ವೇಳೆ ವಿನಿಯೋಗಿಸುವರು.

ನೇಯ್ಗೆಯ ಬಗ್ಗೆ ನಮಗೆ ಅಂಧೇರಿಯಲ್ಲಿ ಮಾತ್ರ ಒಂದು ಸ್ಥಳ ಸಿಕ್ಕಿದ್ದು ಅಲ್ಲಿ ಮಗ್ಗಗಳನ್ನು ಹಾಕಿರುವೆವು. ಮುಂಬಯಿಯಲ್ಲಿ ಸ್ಥಳ ಸಿಗುವದು ಕಠಿಣವಾಗಿದ್ದರಿಂದ ಕಾಲಬಾದೇವಿ ರಸ್ತೆಯಲ್ಲಿಯ ಅಂಗಡಿಯ ಅರ್ಧಭಾಗವನ್ನೂ ನೇಯ್ಗೆ ಕೇಂದ್ರವನ್ನಾಗಿ ಮಾರ್ಪಡಿಸಿದೆ. ಓರ್ವ ತಜ್ಞನನ್ನು ದೊರಕಿಸಿದ್ದು ಈ ಕಾರ್ಯದಲ್ಲಿ ನಾವು ಎಷ್ಟರಮಟ್ಟಿಗೆ ಪ್ರಗತಿ ಹೊಂದುವೆವೋ ನೋಡಬೇಕು.

ಯುದ್ಧದ ಸಮಯದಲ್ಲಿ ಬಟ್ಟೆಯ ಕೊರತೆಯ ಮೂಲಕ ಖಾದಿಮಾರಾಟವು ಹೆಚ್ಚಾಗಿತ್ತು. ಇಂದೂ ದೈನಂದಿನ ಉಪಯೋಗದ ಬಟ್ಟೆಯನ್ನು ದೊರಕಿಸುವದು ಕಠಿಣವಾಗಿದೆ. ಮತ್ತು ಉಳಿದ ಬಟ್ಟೆಗಳು ಕಳ್ಳಪೇಟೆ ಸೇರಿ. ಮಿತಿಮೀರಿದ [illegible] ಹೊಂದಿವೆ ಆದ್ದರಿಂದ ಖಾದಿಯು ಇನ್ನೂ ಅಗ್ಗವೆಂದು ಭಾವಿಸಲ್ಪಟ್ಟಿದ್ದು ಈಗ ಜಾರಿಯಲ್ಲಿರುವ ನೂಲಿನ ಮರ್ಯಾದಿತ ಚಲನವು ಇರದೆ ಹೋಗಿದ್ದರೆ ನಮಗೆ ಬೇಡಿಕೆಗಳನ್ನು ಪೂರೈಸುವದು ಮತ್ತು ಭಾಂಡಾರಗಳಲ್ಲಿಯ ಸಂದಣಿ ಎದುರಿಸುವದು ಆಗುತ್ತಿರಲಿಲ್ಲ. ಇದಲ್ಲದೆ ಖಾದಿಯು ಸಹ ಕಳ್ಳಪೇಟೆ ಸೇರುವ ಅಂಜಿಕೆಯೂ ಇತ್ತು.

ರಾಜಕೀಯ ಜಾಗ್ರತಿಯಾಗುತ್ತ ಬಂದಂತೆ ಖಾದಿಯ ಬಗ್ಗೆ ಬೇಡಿಕೆಯೂ ಹೆಚ್ಚಾಗುತ್ತ ಬಂದಿದೆ. ಖಾದಿಯಲ್ಲಿ ನಿಜವಾದ ವಿಶ್ವಾಸವಿದ್ದವರು ಮತ್ತು ನೂಲುವ ವಿಷಯದಲ್ಲಿ ಇನ್ನೂ ಆಲಸಿಗರಿದ್ದವರು ಈಗ ಚರಖಾ ತಿರುಹಲೇಬೇಕಾಗಿದೆ. ಆದ್ದರಿಂದ ನೂಲುವದನ್ನು ಕಲಿಸಲು ಈಗ ಅನುಕೂಲ ಕಾಲ ಒದಗಿರುವದು."

ಶ್ರೀ ಜೆರಾಜನಿಯವರು ಕೊಟ್ಟ ಅಂಕಿಗಳಲ್ಲಿ ವಿಶೇಷವೇನೂ ಇಲ್ಲ. ಜಗತ್ತು ಮಂಕರಿಂದ [illegible] ಬಿದೆಯೆಂದು ಭಾವಿಸುವವರಿಗೆ ಮುಂಬಯಿಯೂ ಅವರಿಂದಲೇ ತುಂಬಿದೆಯೆಂದು ಎನಿಸುವದು. ಶ್ರದ್ಧಾವಂತರಿಗೆ ಜಗತ್ತು ಒಳ್ಳೆಯದಾಗಿ ತೋರುವದು. ಅಶಕ್ಯ ಕೋಟೆಗೆ ಕೈಹಾಕುವವನು ಭೂಭಾರವಾಗಿ ಗಣಿಸಲ್ಪಡಬಹುದು. ಆದರೆ ವಿಶಿಷ್ಟ ವಿಚಾರದ ಹುಚ್ಚು ಹಿಡಿದವನನ್ನು ಸಮಾಜವು ಬಹಳ ಮೆಚ್ಚುವದು. ಶ್ರೀ ವಿಠ್ಠಲದಾಸರನ್ನು ನಾನು ಈ ಮಾಲಿಕೆಯಲ್ಲಿ ಸೇರಿಸುವೆನು. ಮುಂಬಯಿಯಂಥ ಸುಖಪ್ರಿಯ ನಗರದಲ್ಲಿ ಖಾದಿಯ ಶಕ್ತಿಯನ್ನು ಮನಗಂಡಂತಹ ಸ್ವಲ್ಪಾದರೂ ಜನರು ಸಿಕ್ಕುವದು ಸಮಾಧಾನಕರ ಸಂಗತಿಯೇ ಆಗಿದೆ. ಖಾದಿಯು ಪ್ರತಿಯೊಂದು ಹಳ್ಳಿ ಹಾಗು ಪ್ರತಿಯೊಂದು ಮನೆಯಲ್ಲಿ ತಯಾರಾಗಿ ಅವರಿಂದ ಉಪಯೋಗಿಸಲ್ಪಟ್ಟಾಗಲೆ ಖಾದಿಯ ಬೆಳವಣಿಗೆ ಪೂರ್ಣವಾದಂತಾಗುವದು.

ದಾನ ಧರ್ಮದಲ್ಲಿ ಮುಂಬಯಿಯು ಅಗ್ರಸ್ಥಾನದಲ್ಲಿದ್ದಂತೆ ಅದು ಖಾದಿ ನಿರ್ಮಾಣದ ಕಠಿಣ ಕೆಲಸದಲ್ಲೂ ಪ್ರಮುಖ ಪಾತ್ರ ವಹಿಸಬಲ್ಲದು. ಈ ಸ್ಥಾನಮಾನವನ್ನು ಮುಂಬಯಿಯು ದೊರಕಿಸುವದು ಯಾರಿಗೆ ಬೇಡಾಗಿದೆ? ಶ್ರೀ ವಿಠ್ಠಲದಾಸರು ಹಾಗು ಅವರ ಸಹಕಾರಿಗಳು ಆ ಗುರಿಗಾಗಿ ದುಡಿಯತೊಡಗಿರುವರು. ಅವರು ದಕ್ಷರಾಗಿದ್ದುಕೊಂಡು ಆಗಿಂದಾಗ್ಗೆ ತಪ್ಪುಗಳನ್ನು ಸರಿಪಡಿಸಿಕೊಳ್ಳುತ್ತ ಹೋದಲ್ಲಿ ಅವರ ಕಾರ್ಯವೆಲ್ಲ ಸರಾಗವಾಗಿ ಸಾಗಿ ಅದು ಯಶಸ್ವಿಯಾಗುವದು.

ಸಿಮುಲಾ — ಮೋ. ಕ. ಗಾಂಧಿ

ತಾ. ೯—೫—೪೬ (ಹರಿಜನಬಂಧು)

## ಪೂರ್ಣ ಪಾನನಿರೋಧ

ಹಿಂದುಸ್ತಾನದಲ್ಲಿ ರಾಷ್ಟ್ರೀಯ ಪ್ರಾಂತಿಕ ಸರಕಾರಗಳು ಈಗ ಅಧಿಕಾರಾರೂಢವಾಗಿವೆ. ಸುದೈವದಿಂದ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗಗಳಲ್ಲಿ ಪಾನನಿರೋಧದ ಬಗ್ಗೆ ಭಿನ್ನಾಭಿಪ್ರಾಯವುಂಟಾಗಲಾರದು. ಎಲ್ಲರೂ ಒಂದೇ ಧೋರಣವನ್ನನುಸರಿಸಿದರೆ ಮತ್ತು ಸಂಸ್ಥಾನಗಳು ಸಹ ಸೇರಿದರೆ ಹಿಂದುಸ್ತಾನವು ಅಲ್ಪಾವಧಿಯಲ್ಲಿ ಮಾದಕಗಳಿಂದ ಮುಕ್ತವಾಗಿ ಲಕ್ಷಾಂತರ ಕುಟುಂಬಗಳ ಆಶೀರ್ವಾದಕ್ಕೆ ಪಾತ್ರವಾಗುವದು. ಸಾಮಾನ್ಯವಾಗಿ ದಂಡಿನ ಆಡಳಿತೆ ನಡೆಸಿದ ಗವ್ಹರನರರು ಮತ್ತು ಅವರ ಸಲಹೆಗಾರರು ಕೆಲವು ಪ್ರಾಂತಗಳಲ್ಲಿ ಪ್ರಾರಂಭವಾಗಿದ್ದ ಪಾನನಿರೋಧವನ್ನು ತಿರುಗಿಸಿ ಅದಕ್ಕಾಗಿ ಎತ್ತಿದ ಹಣದ ದುರುಪಯೋಗ ಮಾಡುವಷ್ಟು ನಾಚಿಗೆಗೇಡಿತನ ತೋರಿಸಿದರು. ಈಗ ಆ ಪ್ರಾಂತಗಳು ಮಾದಕ-ಪೇಯ ಮತ್ತು ಔಷಧಿಗಳ ನಿರೋಧವನ್ನು ಕೈಕೊಳ್ಳಲಿ. ಕೇವಲ ಪಾನನಿರೋಧ ಕಾಯಿದೆ ಪಾಸು ಮಾಡಿ ತೃಪ್ತಿ ಹೊಂದುವದು ಬೇಡ. ಕುಡುಕತನದಿಂದಾಗುವ ಹಾನಿಗಳನ್ನು ಕುಡುಕರಿಗೆ ಮನದಟ್ಟುಮಾಡಿಕೊಡಬೇಕು. ಮತ್ತು ಅವರಿಗೆ ಆರೋಗ್ಯಕರ ಪೇಯಗಳನ್ನು ಪೂರೈಸಬೇಕು. ಹಾಗೂ ನಿರಪಾಯಿ ವಿಹಾರಗಳನ್ನು ಕಲ್ಪಿಸಿಕೊಡಬೇಕು. ಪ್ರತಿಯೊಂದು ಸಿಂದಿ ಅಂಗಡಿಯು, ತಪ್ಪಿದರೆ ಅದರ ನೆರೆಮನೆಯು ಫಲಾಹಾರ ಮತ್ತು ವಿಹಾರ ಮಂದಿರವಾಗಬೇಕು. ಈ ವಿಧಾಯಕ ಸೂಚನೆಯನ್ನು ಕಾರ್ಯರೂಪಕ್ಕೆ ತಂದರೆ, ಪಾನನಿರೋಧದಿಂದ ಲಕ್ಷಾಂತರ ಮನೆಗಳನ್ನು ಸರ್ವನಾಶದಿಂದ ಉಳಿಸಿದಂತಾಗುವದಲ್ಲದೆ ಸರಕಾರಕ್ಕೆ ಹೊಸ ಉತ್ಪನ್ನ ದೊರೆಯುವದು.

ಮೇಲಾಗಿ ಸಿಂದಿಯ ಬದಲು ಬೆಲ್ಲಕ್ಕಾಗಿ ನಿರಾ ತೆಗೆಯಲು ಪ್ರಾರಂಭಿಸಬಹುದು. ಜನತೆಗೆ ಸಕ್ಕರೆ ಅಗ್ಗದಲ್ಲೆ ಅಗತ್ಯಬೇಕಾಗಿರುವದು. ಅಲ್ಲದೆ ಕಬ್ಬಿನ ಬೆಲ್ಲಕ್ಕಿಂತ ಈಚಲ ಬೆಲ್ಲ ಕೆಲವು ದೃಷ್ಟಿಯಿಂದ ಶ್ರೇಷ್ಠವೆಂದು ಈ ಪತ್ರಿಕೆಯಲ್ಲಿ ಹಲವಾರು ಲೇಖಗಳನ್ನು ಬರೆದಿದೆ.

ಲಖನೌ ನಗರದ "ಕ್ರಿಶ್ಚಿಯನ್ ಮಹಿಳೆಯರ ಪಾನನಿರೋಧ ಸಂಸ್ಥೆ"ಯವರು ಪತ್ರಿಕೆಗಳಿಗೆ ಕಳಿಸಿದ ಪರಿಪತ್ರದ ಕೆಲವು ಭಾಗವನ್ನು ಓದಿ ಮೇಲಿನ ವಿಚಾರಗಳು ನನ್ನಲ್ಲಿ ಹೊಳೆದವು. ಅದರಲ್ಲಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ "ತರುಣರು ಏನು ಮಾಡಬಲ್ಲರು" ಎಂಬ ಶಿರೋಲೇಖದಲ್ಲಿ ಕೊಟ್ಟ ಕೆಳಗಿನ ವಿಚಾರಗಳನ್ನು ಇಲ್ಲಿ ಉದ್ಧರಿಸುತ್ತೇನೆ:

(೧) ಮಾದಕ ಪೇಯ ಮತ್ತು ತಂಬಾಕ ಒಳಗೊಂಡು ಎಲ್ಲ ತರದ ಚಟದ ವಸ್ತುಗಳನ್ನು ಮುಟ್ಟುವದಿಲ್ಲವೆಂದು ಪ್ರತಿಜ್ಞೆ ಮಾಡಿರಿ. ಕೆಟ್ಟ ಚಟದ ಎಲ್ಲ ವಸ್ತುಗಳನ್ನು ಬಿಟ್ಟರೆ ಮಾತ್ರ ಪ್ರತಿಜ್ಞೆ ಮಾಡಲು ಅನುಕೂಲವಾಗುವದು.

(೨) ಶಾಲೆಗಳಲ್ಲಿ ಮದ್ಯ ಮತ್ತು ಮಾದಕ ಔಷಧಿಗಳ ಗುಣದೋಷಗಳ ಶಿಕ್ಷಣ ಕೊಡುವಂತೆ ಕೇಳಿರಿ.

(೩) ಪಾನನಿರೋಧ ಮತ್ತು ಮಾದಕಪೇಯಗಳಿಂದ ಜನತೆಗಾದ ಹಾನಿ ತಿಳಿಸಿಕೊಡುವ ಮೊದಲಾದ ಸಾಮಾಜಿಕ ಸೇವೆಯಲ್ಲಿ ಸಹ, ಶಿಕ್ಷಣಕೊಡುವಂತೆ ಕೇಳಿರಿ.

(೪) ಗ್ರಾಮಾಂತರಗಳಲ್ಲಿ ಕೈಕೊಳ್ಳಲಾದ ಹಣ ಉಳಿತಾಯದ ಪ್ರಚಾರದಲ್ಲಿ ಪಾನನಿರೋಧವನ್ನು ಸೇರಿಸುವಂತೆ ಶಿಫಾರಸು ಮಾಡಿರಿ.

(೫) ಸರಾಯಿ ಭಟ್ಟಿಗಳಲ್ಲಿ ಹಾಳುಮಾಡುತ್ತಿರುವ ಆಹಾರ ಧಾನ್ಯವನ್ನು ಬರಗಾಲಪೀಡಿತರಿಗಾಗಿ ಉಳಿಸುವಂತೆ ಪ್ರಯತ್ನಿಸಿರಿ.

(೬) ಪಾನನಿರೋಧ ಸಂಸ್ಥೆಗಳೊಡನೆ ಸಹಕರಿಸಿ ಕೆಲಸ ಮಾಡಿರಿ. ಲಖನೌ ನಗರದ ಕ್ರಿಶ್ಚಿಯನ್ ಮಹಿಳೆಯರ ಪಾನನಿರೋಧ ಸಂಘವು ೫೫ ವರ್ಷಗಳಿಂದ ಈ ಹೋರಾಟ ಸಾಗಿಸಿದೆ. ನಿಮ್ಮ ಪ್ರೋತ್ಸಾಹ ಮತ್ತು ಬೆಂಬಲ ಅದಕ್ಕೆ ಅವಶ್ಯವಿದೆ. ನಮ್ಮ ಸಂಘದ ಉದ್ದೇಶ:— "ಪರಮಾತ್ಮನ ಪ್ರೀತಿಗಾಗಿ, ಮನೆಯ ರಕ್ಷಣೆಗಾಗಿ ಮತ್ತು ಪ್ರತಿಯೊಂದು ರಾಷ್ಟ್ರದ ಸುರಕ್ಷಿತತೆಗಾಗಿ."

(೭) ಪಾನನಿರೋಧ ಸಾಹಿತ್ಯದ ಉಪಯೋಗ ಮಾಡಿಕೊಳ್ಳಿರಿ ವರ್ಷಂಪ್ರತಿ ಎರಡು ರೂಪಾಯಿ ಕೊಟ್ಟರೆ, ಹಿಂದಿ ಅಥವಾ ಉರ್ದು ಮತ್ತು ಇನ್ನು ಕೆಲವು ಪ್ರಾಂತಿಕ ಭಾಷೆಗಳಲ್ಲಿ ಹಸ್ತಪತ್ರಿಕೆಗಳು ನಿಮಗೆ ಕಳಿಸಲ್ಪಡುವವು. ಪಾನನಿರೋಧದ ಸುದ್ದಿಗಳನ್ನು ಕೊಡುವ ನಮ್ಮ ಇಂಗ್ಲೀಷ ಮಾಸಿಕವನ್ನು ಸಾರ್ವಜನಿಕ ವಾಚನಾಲಯಗಳಲ್ಲಿಡಬಹುದು. ವಿದ್ಯಾರ್ಥಿಗಳು ಈ ಮಾಸಿಕ ತರಿಸಿಕೊಳ್ಳಬಯಸಿದರೆ ಮೇಲಿನ ಸವಲತ್ತು ಕೊಡಬಹುದು.

(೮) ಬಿಡುವಿನ ದಿನಗಳು ಇಂಥ ಸೇವೆಗೆ ಅತ್ಯುತ್ತಮ ಸಮಯ.

(೯) ಸ್ವಂತ ಲಾಭಕ್ಕಿಂತ ರಾಷ್ಟ್ರದ ಲಾಭವನ್ನು ದೃಷ್ಟಿಯ ಮುಂದಿಟ್ಟುಕೊಳ್ಳಲು ಕಲಿಯಬೇಕು.

ಸಿಮಲಾ ಮೋ. ಕ. ಗಾಂಧಿ

೭—೫—೪೬

## ರೋಮನ್ ಲಿಪಿ ಮತ್ತು ಸಾಂಸ್ಕೃತಿಕ ದಾಸ್ಯ

ಅಝಾದ ಹಿಂದ ಸೈನ್ಯದ ಜನರ ಸಹಾಯಾರ್ಥವಾಗಿ ರಚಿಸಲ್ಪಟ್ಟಿರುವ ಕೇಂದ್ರ ಸಮಿತಿಯವರು ಅಝಾದ ಹಿಂದ ಸೈನ್ಯದವರಿಗಾಗಿ ರೋಮನ್ ಲಿಪಿಯಲ್ಲಿ ಒಂದು "ನ್ಯೂಸ್ ಬುಲೆಟಿನ್" (ವಾರ್ತಾ ಪತ್ರ) ಹೊರಡಿಸಬೇಕೆಂಬ ವಿಚಾರವನ್ನು ನಡೆಸಿದ್ದಾರೆ. ಅಝಾದ ಹಿಂದ ಸರಕಾರದ ಶ್ರೀ ಅಯ್ಯರರು ಈ ವಿಷಯ ಮಾತಾಡಲು ಒಂದು ದಿನ ಗಾಂಧೀಜಿಯ ಕಡೆ ಬಂದಿದ್ದರು. ಅವರು ಹೇಳಿದರು: "ಸಮಿತಿಗೆ ರೋಮನ್ ಲಿಪಿಯ ಮೇಲೆ ಅಂಥ ವಿಶೇಷ ಮೋಹವೇನೂ ಇಲ್ಲ. ಕೇವಲ ತಮ್ಮ ಕೆಲಸ ಸಾಗಿಸುವ ಒಂದು ಉಪಾಯವೆಂದು ತಿಳಿದುಕೊಂಡು ಅದು ರೋಮನ್ ಲಿಪಿಯನ್ನು ಉಪಯೋಗಿಸಲು ನಿರ್ಧರಿಸಿದೆ. ವಾರ್ತಾ ಪತ್ರವನ್ನು ರೋಮನ್ ಲಿಪಿಯಲ್ಲಿ ಮುದ್ರಿಸದಿದ್ದರೆ ನಾಗರಿ, ಉರ್ದು ಮತ್ತು ತಮಿಳು ಲಿಪಿಗಳಲ್ಲಿ ಬೇರೆ ಬೇರೆಯಾಗಿ ಮುದ್ರಿಸಬೇಕಾಗಿ ಬಂದು ವೆಚ್ಚಕ್ಕೆ ಲೆಕ್ಕವೇ ಇಲ್ಲದಂತಾಗುವದು." ಮುಂದುವರಿಸುತ್ತ ಅವರು, "ಇದರಲ್ಲಿ ಹೊಸತೇನೂ ಇಲ್ಲ." ಎಂದೂ ಹೇಳಿದರು. "ಯಾವ ಪದ್ಧತಿ ನಡೆಯುತ್ತ ಬಂದಿದೆಯೋ ಅದನ್ನೇ ನಾವು ಅನುಸರಿಸಿದ್ದೇವೆ. ಅಝಾದ ಹಿಂದ ಸೈನಿಕರು ಹಿಂದೀ ಸೈನ್ಯದಲ್ಲಿದ್ದಾಗಿನಿಂದಲೇ ರೋಮನ್ ಲಿಪಿಯ ಅಭ್ಯಾಸ ಅವರಿಗಿತ್ತು. ಅದರಿಂದಲೆ ಅವರು ಆಗ್ನೇಯ ಏಶಿಯಾದಲ್ಲಿ ತಮ್ಮ ಕೆಲಸವನ್ನು ಪ್ರಾರಂಭಿಸಿದಾಗ ಅದೇ ರೀತಿಯನ್ನು ಸಾಗಿಸಿಕೊಂಡು ಹೋದರು." ಗಾಂಧೀಜಿ ಅದಕ್ಕೆ ಕೊಟ್ಟ ಉತ್ತರ: "ಇಂದು ನೀವು ಆಗ್ನೇಯ ಏಶಿಯಾದ ದೇಶದಲ್ಲಿಲ್ಲ! ಇಲ್ಲ ಹಿಂದುಸ್ತಾನದಲ್ಲಿ ಕೆಲಸ ನಡೆಸುತಿದ್ದೀರೆಂಬುದನ್ನು ಮರೆಯಬೇಡಿರಿ. ನಾನು ನಿಮಗೊಂದು ಮಾತು ಕೇಳುವೆ: ಈ ಜನರು ತಮ್ಮ ಮನೆಯವರಿಗೆ-ಹೆಂಡತಿ ಮಕ್ಕಳಿಗೆ-ಕಾಗದ ಬರೆಯುತ್ತಲೇ ಇರಬಹುದಲ್ಲ. ಎಲ್ಲ ಕಾಗದಗಳನ್ನು ರೋಮನ್ ಲಿಪಿಯಲ್ಲಿಯೇ ಬರೆಯಲಾಗುತಿಯೆ?"

ಶ್ರೀ ಅಯ್ಯರರು ಉತ್ತರಿಸಿದರು: "ಅಹಾ! ಅದು ಹೇಗಾದೀತು? ಪತ್ರಗಳನ್ನು ಎಲ್ಲರೂ ನಾಗರಿ ಅಥವಾ ಉರ್ದು ಅಥವಾ ತಮಿಳು ಇಲ್ಲವೆ ಬೇರಾವ ಹಿಂದೀ ಲಿಪಿಯಲ್ಲಿಯೇ ಬರೆಯುತ್ತಾರೆ."

ಇದಕ್ಕೆ ಗಾಂಧಿಜಿಯೆಂದರು, "ಇದರ ಅರ್ಥವಾಯಿತು ಎಲ್ಲರಿಗೂ ಹಿಂದುಸ್ತಾನದ ಒಂದಲ್ಲ ಒಂದು ಲಿಪಿ ಬಂದೇ ಬರುತ್ತದೆಯೆಂದು. ನಮ್ಮ ಹತ್ತಿರ ನಮ್ಮದೇ ಆದ ಯಾವುದೊಂದು ಲಿಪಿಯಿಲ್ಲದೆ ಆ ಕಾರಣದಿಂದ ಕೆಲಸ ಸಾಗಿಸುವ ಸಲುವಾಗಿ ನಾವೇ ರೋಮನ್ ಲಿಪಿಯನ್ನೊಪ್ಪಿ ಬಳಸತೊಡಗಿದೆವೆಂದರೆ ಆ ಮಾತು ಬೇರೆ, ಅದು ಅರ್ಥಗುವ ಮಾತು. ಆದರೆ ಹಿಂದುಸ್ತಾನಿಗೆ ನಾಗರಿ ಮತ್ತು ಉರ್ದೂ ಇವೆರಡೂ ಬರೆಹಗಳು ಮಾನ್ಯವಾಗಿ ಪ್ರಚಲಿತವಾಗಿದ್ದರೂ ನೀವು ಹಿಂದುಸ್ತಾನಿಗಾಗಿ ರೋಮನ್ ಲಿಪಿಯನ್ನು ಉಪಯೋಗಿಸಲು ಸಿದ್ಧರಾಗಿರುವದನ್ನು ನೋಡಿದರೆ ಇಂಗ್ರೇಜರು ನಮ್ಮ ಹೃದಯ, ಬುದ್ಧಿಗಳೆರಡರ ಮೇಲೆ ಎಂಥ ಹಿಡಿತವನ್ನು ಸಂಪಾದಿಸಿದ್ದಾರೆಂದು ಗೊತ್ತಾಗುವದು. ಇಂಗ್ಲೀಷರು ನಿಮ್ಮನ್ನು ಗೆದ್ದರು ಮತ್ತು ನೀವು ಅವರನ್ನು ಗೆಲ್ಲುವ ಸಲುವಾಗಿ ಅವರದೇ ವೇಷ ಭೂಷೆಗಳನ್ನು ಧರಿಸಿದಿರಿ ಅಲ್ಲದೆ ಆಗ್ನೇಯ ಏಶಿಯಾದಲ್ಲಿ ಅವರ ರೋಮನ್ ಲಿಪಿಯಲ್ಲಿ ಪತ್ರಿಕೆ ಹೊರಡಿಸಿದಿರಿ. ನಮ್ಮ ಸಾಂಸ್ಕೃತಿಕ ದಾಸ್ಯದ ಈ ಕುರುಹನ್ನು ತೊಡೆದು ಹಾಕಿ ನೀವು ನಿಮ್ಮ ಪತ್ರಿಕೆಯನ್ನು ರೋಮನ್ ಲಿಪಿಯ ಬದಲು ಹಿಂದುಸ್ತಾನದ ಬರೆಹಗಳಲ್ಲಿಯೇ ಪ್ರಕಟಿಸುವ ಹಟ ತೋರಿಸಬೇಕಾಗಿತ್ತು. ಬ್ರಿಟಿಶರಿಗೆ ನಮ್ಮ ಮೇಲೆ ಅಧಿಕಾರ ನಡೆಸಬೇಕಾಗಿತ್ತು. ಅದಕ್ಕಾಗಿ ಬ್ರಿಟಿಶ ಅಧಿಕಾರಿಗಳೂ ಸಿಪಾಯಿಗಳೂ ಹಿಂದುಸ್ತಾನಿಯನ್ನು ಕಲಿಯಬೇಕಾಯಿತು. ಬೇರೆ ವಿಧಿಯೇ ಇರಲಿಲ್ಲ. ಈ ಕಾರಣದಿಂದ ಮುಖ್ಯವಾಗಿ ಅವರ ಕೆಲಸ ಸುಲಭವಾಗುವಂತೆ ಹಿಂದುಸ್ತಾನಿಗಾಗಿ ರೋಮನ್ ಲಿಪಿಯನ್ನು ಬಳಸುವದು ಆರಂಭವಾಯಿತು. ಈ ಪ್ರಕಾರ ಅವರು ಒಂದೆಡೆ ಉರ್ದೂ ಲಿಪಿಯ ಚಿತ್ರವಿಚಿತ್ರ ಅಕ್ಷರಗಳ ಸಿಕ್ಕಿನಿಂದ ತಾವು ಪಾರಾದುದಲ್ಲದೆ ಇನ್ನೊಂದೆಡೆ ರೋಮನ್ ಲಿಪಿಯಲ್ಲಷ್ಟೆ ಸಾಗಬಹುದಾದ ತಮ್ಮ ಟಾಯಿಪರಾಯಟರ್ ತಂತಿಯಂತ್ರ, ಮುದ್ರಣ ಕಲೆಗಳ ಮರುಳನ್ನು ನಮಗೆ ಹಿಡಿಸಿದರು. ನಾವು ಅದಕ್ಕೆ ಮಾರುಹೋದೆವು. ಇಂದು ನಾವು ನೂರಾರು ವರ್ಷ ಹಳೆಯ ಹಿಂದುಸ್ತಾನದ ದಾಸ್ಯವನ್ನು ಬೇರುಸಹಿತ ಕಿತ್ತೊಗೆಯಲು ಚಡಪಡಿಸುತಿರುವಾಗ ಸಾಂಸ್ಕೃತಿಕ ದಾಸ್ಯದ ಈ ಕುರುಹಿನ ದಾರಿ ಹಿಡಿದು ಮತ್ತೆ ಮರಳುವದು ಸಲ್ಲದು. ಬಗೆಬಗೆಯ ಬಿರುದು ಬಿಲ್ಲೆಗಳು ಸಿಕ್ಕಾವು, ಒಳ್ಳೆಯ ಸಂಬಳ ದೊರೆಯುತ್ತದೆ, ಭೂಮಿ ಜಹಗೀರಿಗಳು ಸಿಗಬಹುದು ಎಂಬ ಆಶೆಯಿಂದ ನೀವು ಬ್ರಿಟಿಶ ಸೈನ್ಯದಲ್ಲಿ ಕೆಲಸ ಮಾಡುತಿದ್ದಿರಿ. ಆದರೆ ಇಂದು ನಿಮಗೆ ಈ ಲಾಲಸೆಗಳ ಅವಶ್ಯಕತೆಯಿಲ್ಲ. ಇಂದು ನೀವು ದೇಶಕ್ಕೆ ಸ್ವಾತಂತ್ರ್ಯವನ್ನು ಗಳಿಸಬೇಕು, ಅದರ ಮಾನಮರ್ಯಾದೆ ಕಾಯಬೇಕು, ವರ್ಚಸ್ಸು ಬೆಳೆಸಬೇಕೆಂಬ ಬಯಕೆಯಿಂದ ಮಾತ್ರ ಪ್ರೇರಿತರಾಗಿ ನೌಕರಿ ಮಾಡುತ್ತೀರಿ. ನೀವು ಯಾವುದೊಂದು ಸುಲಭ ಮಾರ್ಗದ ಶೋಧಕ್ಕೇನೂ ಹೊರಟಿಲ್ಲವಲ್ಲ?

"ಹಿಂದುಸ್ತಾನ ಬೇಗನೆ ಸ್ವತಂತ್ರವಾಗಲಿದೆ. ಸ್ವಾತಂತ್ರ್ಯ ದೊರೆತೊಡನೆ ತಕ್ಷಣ ಹಿಂದುಸ್ತಾನಕ್ಕೆ ಯಾವುದೊಂದು ಲಿಪಿ ಸಿದ್ಧವಾಗಿಬಿಡುವದೆಂದು ತಿಳಿದುಕೊಳ್ಳಬೇಡಿರಿ. ನೀವೂ ನಾನೂ ಪ್ರಾಮಾಣಿಕತನದಿಂದಲೂ ಆಸ್ಥೆಯಿಂದಲೂ ಎರಡೂ ಲಿಪಿಗಳನ್ನು ಕಲಿತರೆನೇ ಅದರಿಂದ ಎಲ್ಲರಿಗೂ ಉಪಯೋಗ ಬೀಳುವ ಹೊಸ ಲಿಪಿಯೊಂದು ಹುಟ್ಟೀತು. ಏನು ಮಾಡಿದರೂ ಅದಕ್ಕೆ ಮೊದಲು ಹುಟ್ಟಲಾರದು. ಪರಿಪೂರ್ಣ ಸ್ವಾತಂತ್ರ್ಯಕ್ಕಾಗಿ ನಾವು ಕಡಿಮೆಯೆಂದರೆ ಇಷ್ಟಾದರೂ ಬೆಲೆ ಕೊಟ್ಟೇ ತೀರಿಸಬೇಕು."

ತಮ್ಮ ವಾದವನ್ನು ಬಲಗೊಳಿಸಲು ಗಾಂಧೀಜಿ ದಕ್ಷಿಣ ಆಫ್ರಿಕೆಯ ಉದಾಹರಣೆಯಿತ್ತರು. ಅಲ್ಲಿಯವರು ತಮ್ಮ ಎಲ್ಲ ಕೆಲಸ ಕಾರ್ಯಗಳನ್ನು ಎರಡು ಭಾಷೆಗಳಲ್ಲಿ ಸಾಗಿಸುತ್ತಾರೆ. ಸರಕಾರೀ ಗಜೆಟ್ಟೂ ಎರಡು ಭಾಷೆಗಳಲ್ಲಿ ಹೊರಡುತ್ತದೆ. ಶಾಲೆಗಳಲ್ಲಿ ಪಠ್ಯ ಪುಸ್ತಕಗಳೂ ಎರಡು ಭಾಷೆಗಳಲ್ಲಿ ಮುದ್ರಿಸಲ್ಪಡುತ್ತವೆ. "ಇದೆಲ್ಲದರ ಫಲವಾಗಿ ದಕ್ಷಿಣ ಆಫ್ರಿಕೆಯ ರಾಜ್ಯ ಬೇರೆ ಬೇರೆ ತುಣುಕುಗಳ ಹೆಸರಿಂದ ಮರೆಯದೆ 'ಯೂನಿಯನ್' ಎಂಬ ಹೆಸರಿಂದ ಎಸೆಯುತ್ತಲಿದೆ. ತಮ್ಮೀ ಯೂನಿಯನ್ನಿನ ಐಕ್ಯವನ್ನು ಸ್ಥಿರವಾಗಿರಿಸಿಕೊಳ್ಳುವದಕ್ಕಾಗಿ ಅವರು ಪ್ರತಿಯೊಂದು ಪ್ರಾಂತಕ್ಕೆ ಒಂದೊಂದರ ಹೆಸರಲ್ಲಿ ನಾಲ್ಕು ನಾಲ್ಕು ರಾಜಧಾನಿಗಳನ್ನು ಇಟ್ಟಿದ್ದಾರೆ. ಸ್ವತಂತ್ರ ಜನರೂ, ಸ್ವಾತಂತ್ರ್ಯಪ್ರಿಯ ಜನರೂ ಹೋದ ಹಾದಿಯಿದು."

ಶ್ರೀ ಅಯ್ಯರರು ಗಾಂಧೀಜಿಯ ವಾದವನ್ನು ಒಪ್ಪಿಕೊಳ್ಳುತ್ತ ಹೇಳಿದರು: "ನಾವು ನಮ್ಮ ಪತ್ರಿಕೆಯನ್ನು ನಾಗರಿ ಮತ್ತು ಉರ್ದು ಲಿಪಿಗಳಲ್ಲಿ ಹೊರಡಿಸುವೆವು, ರೋಮನ್ನಿನಲ್ಲಲ್ಲ."

ಹೊಸದಿಲ್ಲಿ

೨೦-೫—೪೬ ಪ್ಯಾರೇಲಾಲ

---

ಪ್ರ— ಚುನಾವಣೆಗೆ ನಿಲ್ಲುವ ಕಾಂಗ್ರೆಸ್ಸಿಗರು ನಿತ್ಯ ಖಾದಿಧಾರಿಗಳಾಗಿರಬೇಕೆಂದು ಕಾಂಗ್ರೆಸ ಘಟನೆಯಲ್ಲಿ ಹೇಳಿದೆ. ಅಖಿಲ ಭಾರತ ಚರಖಾ ಸಂಘದಿಂದ ಮನ್ನಣೆ ಪಡೆದ ಖಾದಿಯನ್ನೇ ಉಪಯೋಗಿಸಬೇಕೆಂದು ಇದರ ಅರ್ಥವಲ್ಲವೇ?

ಉ— ನನ್ನ ಅಭಿಪ್ರಾಯದಲ್ಲಿ, ಇದಲ್ಲದೆ ಬೇರೊಂದು ಅರ್ಥವಿಲ್ಲ.

ಪ್ರ:— ಅಪ್ರಮಾಣಿತ ಖಾದಿ ವ್ಯಾಪಾರ ಮಾಡುವವನು ಕಾಂಗ್ರೆಸ ಸಮಿತಿಯ ಅಧಿಕಾರ ಸ್ಥಳಗಳಿಗೆ ಅರ್ಹನಾಗಬಲ್ಲನೇ?

ಉ:— ಅಧಿಕಾರ ಸ್ಥಳಕ್ಕೆ ಅರ್ಹನಾಗುವದಂತೂ ಒತ್ತಟ್ಟಿಗಿರಲಿ, ಅಪ್ರಮಾಣಿತ ಖಾದಿ ಬಟ್ಟೆ ಮಾರುವವನು ಕಾಂಗ್ರೆಸ್ಸಿಗನು ಹೇಗಾಗುವನೆಂದು ನನಗೆ ತಿಳಿಯದಾಗಿದೆ.

ಪ್ರ:— ಅಪ್ರಮಾಣಿತ ಖಾದಿ ಮಾರುವವರು ಕಾಂಗ್ರೆಸ್ಸಿಗರಾಗಲಾರರೆಂದು ನಿಮ್ಮ ಅಭಿಪ್ರಾಯವಿದೆ. ಆದರೆ ಗಿರಣಿ ಮತ್ತು ಪರದೇಶಿ ಬಟ್ಟೆ ಮಾರಾಟ ಮಾಡುವವರು ಕಾಂಗ್ರೆಸದ ಅಧಿಕಾರ ಸ್ಥಳಗಳಲ್ಲಿರುವರು. ಅವರ ಗತಿ ಏನು?

ಉ- ಎರಡನೇ ಪ್ರಶ್ನೆಗೆ ಕೊಟ್ಟ ಉತ್ತರವು ಮೂರನೆಯದಕ್ಕೂ ಅನ್ವಯಿಸುತ್ತದೆ. ಇದೇ ಕಾರಣದ ಮೂಲಕ ಕಾಂಗ್ರೆಸಿನ ಘಟನೆಯಲ್ಲಿಯ ಕೆಲವು ನಿಯಮಗಳನ್ನು ತೆಗೆದು ಹಾಕಲು ಸೂಚಿಸಿರುವೆನು. ಇಂಥ ನಿಯಮಗಳ ಪಾಲನೆ ಸಾಧ್ಯವಿಲ್ಲವೆಂದು ಅನುಭವದಿಂದ ಕಂಡುಬಂದಿದೆ.

ಸಿಮಲಾ ಮೋ. ಕ. ಗಾಂಧಿ

೮—೫—೪೬

# ಟೀಕೆ — ಟಿಪ್ಪಣಿಗಳು

## ಹರಿಜನ ಅಡಿಗೆಯವರು

ಮುಂಬರುವ ಕಾಂಗ್ರೆಸ ಅಧಿವೇಶನದಲ್ಲಿ ಅಡಿಗೆಯವರೆಲ್ಲರೂ ಹರಿಜನರಿರಬೇಕೆಂದೂ ಆ ಉದ್ದೇಶದಿಂದ ಪಾಕಶಾಸ್ತ್ರ ಮತ್ತು ಸ್ವಚ್ಛತೆಯಲ್ಲಿ ಕೆಲವು ಹರಿಜನರನ್ನು ತರಬೇತು ಮಾಡಬೇಕೆಂದೂ ಓರ್ವರು ಸೂಚಿಸಿರುತ್ತಾರೆ- 'ಕಾಂಗ್ರೆಸ ಅಧಿವೇಶನ ಸೇರುವ ಪ್ರಾಂತದ ಕಾಂಗ್ರೆಸ್ಸಿಗರ ಮೇಲೆ ಈ ಹೊಣೆ ಹೊರಿಸಬೇಕು. ಅಧಿವೇಶನ ಮುಗಿದ ನಂತರ ಈ ಅಡಿಗೆಯವರನ್ನು ಶ್ರೀಮಂತ ಕಾಂಗ್ರೆಸ್ಸಿಗರು ತಮ್ಮ ಮನೆಯಲ್ಲಿ ಕೆಲಸಕ್ಕಿಟ್ಟುಕೊಳ್ಳಬೇಕು.' ಅಸ್ಪೃಶ್ಯತೆಯು ಗತಕಾಲದ ಮಾತೆಂದು ಪ್ರತ್ಯಕ್ಷ ಕೃತಿಯಲ್ಲಿ ತೋರಿಸುವ ಇಂಥ ಸೂಚನೆಗಳು ಸ್ವಾಗತಾರ್ಹವಿರುವವು. ಈ ಸೂಚನೆಯನ್ನು ಪುಷ್ಟೀಕರಿಸುವ ಕಾಂಗ್ರೆಸ್ಸಿಗರು ಅಧಿವೇಶನದ ಮಾರ್ಗ ನಿರೀಕ್ಷಿಸಬೇಕಾಗಿಲ್ಲ. ಅವರು ಇವತ್ತಿನಿಂದಲೇ ಹರಿಜನರನ್ನು ಅಡಿಗೆಯವರೆಂದಲ್ಲದೆ ಉಳಿದ ಎಲ್ಲ ತರದ ಕೆಲಸಕ್ಕಿಟ್ಟುಕೊಳ್ಳಬಹುದು. ಅಲ್ಲದೆ ಅನುಕೂಲಸ್ಥರು ಹರಿಜನ ಬಾಲಕರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಲಾಲನೆ ಪಾಲನೆ ಮಾಡಿ ಸರಿಯಾದ ಶಿಕ್ಷಣ ಕೊಡಿಸಬೇಕು. ಸ್ತ್ರೀ ಪುರುಷರು ಸಂಕಲ್ಪನಿಷ್ಠರಿದ್ದರೆ ಮತ್ತು ಧರ್ಮದ ಹೆಸರಿನಲ್ಲಿ ಬಂಧುಗಳನ್ನು ಅನ್ಯಾಯವಾಗಿ ದೂರವಿಟ್ಟುದುದರ ಅರಿವಾಗಿದ್ದರೆ ಮಾತ್ರ ಇದು ಸಾಧ್ಯವಿದೆ.

ಸಿಮುಲಾ — ಮೋ. ಕ. ಗಾಂಧಿ.
೮—೫—೪೬

## ಅಹಿಂಸೆ ಮತ್ತು ಖಾದಿ

ಕಾಂಗ್ರೆಸ ಘಟನೆಯಲ್ಲಿ ಆಮೂಲಾಗ್ರ ಬದಲಾವಣೆಗಳಾಗಲಿರುವವು. ಆದರೆ ಅಸತ್ಯ ಮತ್ತು ಡಾಂಭಿಕತನವನ್ನು ನಿರ್ಮೂಲಗೊಳಿಸಬೇಕಾದರೆ ಕಾಂಗ್ರೆಸ ಘಟನೆಯ ಮೊದಲನೇ ಕಲಮಿನಲ್ಲಿರುವ "ಕ್ರಮಬದ್ಧ ಮತ್ತು ಶಾಂತ'' ಎಂಬ ಶಬ್ದಗಳನ್ನು ಹಾಗೂ ಖಾದಿ ವಿಷಯವಾಗಿದ್ದ ನಿಯಮವನ್ನು ತಗೆದುಹಾಕುವದು ಅತ್ಯವಶ್ಯವಿರುವದು. ಬಹುಜನ ಕಾಂಗ್ರೆಸ್ಸಿಗರು ಸತ್ಯ ಮತ್ತು ಅಹಿಂಸಾವಾದಿಗಳಾಗಿಲ್ಲವೆಂದೂ ಖಾದಿಧಾರಿಗಳಿಲ್ಲವೆಂದೂ ಅನುಭವದಿಂದ ಕಂಡುಬಂದಿದೆ. ಸತ್ಯ ಮತ್ತು ಅಹಿಂಸಾವ್ರತಧಾರಿಯಾದ ಹಾಗೂ ಖಾದಿ ಅದರ ದ್ಯೋತಕವೆಂದು ಭಾವಿಸಿದ ನಾನು ಈ ನಿಯಮಗಳನ್ನು ಕಿತ್ತುಹಾಕಬೇಕೆಂದು ಹೇಳುವ ಧೈರ್ಯ ಮಾಡುತ್ತೇನೆ. ಮನಸಿಗೆ ಬಂದವರು ಸತ್ಯ ಮತ್ತು ಅಹಿಂಸಾಧಾರಿಗಳಾಗಬಹುದು. ಹಾಗೂ ಖಾದಿ ಬಟ್ಟೆ ಧರಿಸಬಹುದು. ಹಿಂದುಸ್ತಾನಕ್ಕೆ ಇಲ್ಲವೆ ಪ್ರಪಂಚಕ್ಕೆ ಮೋಸ ಮಾಡುವದಕ್ಕೆ ಮಾತ್ರ ಅಸ್ಪದ ಬೇಡ. ವಿಲಕ್ಷಣವೆನಿಸಿದರೂ ಸಹ, ಈ ನಿಯಮಗಳನ್ನು ಇಟ್ಟುಕೊಳ್ಳುವದಕ್ಕಿಂತ ಕಿತ್ತಿಹಾಕಿದರೆ ನಾವು ಹೆಚ್ಚು ಸುಖಿಗಳೂ ಅಹಿಂಸಾವಾದಿಗಳೂ ಮತ್ತು ಖಾದಿ ಪ್ರೇಮಿಗಳೂ ಆಗುವೆವು. ಈ ನಿಯಮಗಳನ್ನು ಕಿತ್ತಿಹಾಕುವದಕ್ಕೆ ನಾನು ಕೆಲಕಾಲದ ಹಿಂದೆ ತಿದ್ದುಪಡಿ ಸೂಚಿಸಿದ್ದೆನೆಂಬುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಆಗ ನನಗೆ ಯಶಸ್ಸು ದೊರೆಯಲಿಲ್ಲ. ಅದರಿಂದ ನನಗೆ ಸಂತೋಷವಾಯಿತು. ಆದರೆ ಹಾಗೆ ಸಂತೋಷಿಸಿದುದು ತಪ್ಪು. ಈಗ ನನ್ನ ಸೂಚನೆ ನಿರಾಕೃತವಾದರೆ ನನಗೆ ದುಃಖವಾಗುವದು. ಸತ್ಯಕ್ಕಿಂತ ಡಾಂಭಿಕತನಕ್ಕೆ ನಾವು ಮನ್ನಣೆ ಕೊಡುತ್ತೇವೆಂದು ಜನರು ಆಡಿಕೊಳ್ಳದಿರಲಿ.

ಸಿಮುಲಾ — ಮೋ. ಕ. ಗಾಂಧಿ
೮—೫—೪೬

## ಪತ್ರಕಾರರಿಗೆ

" ಹರಿಜನ '' ಸಾಪ್ತಾಹಿಕಗಳು ಪ್ರಾರಂಭವಾದಂದಿನಿಂದ ದಿನಾಲೂ ನನಗೆ ಬರುತ್ತಿರುವ ಟಪ್ಪಾಲು ನಾಲ್ಕು ಪಟ್ಟು ಬೆಳೆದಿದೆಯೆಂದು ಹೇಳಬಹುದು. ಪ್ರತಿಯೊಂದು ಪತ್ರಕ್ಕೆ ಉತ್ತರ ಕೊಡುವದು ಶಕ್ಯವಿಲ್ಲ. ಪ್ರತಿಯೊಂದು ಪತ್ರವನ್ನು ಓದಲಾಗುವದು, ಆದರೆ ನನ್ನಿಂದಲ್ಲ. ಅವುಗಳನ್ನು ನಾನೇ ಓದಲು ಕುಳಿತರೆ, ರಾಷ್ಟ್ರಸೇವೆ ಮಾಡುವದಕ್ಕೆ ಅವಕಾಶವುಳಿಯುವದಿಲ್ಲ. ನಾನು ಅಗತ್ಯವಾಗಿ ಗಮನಿಸಬೇಕಾದ ಪತ್ರಗಳನ್ನು ಮಾತ್ರ ಕೆಲಸಗಾರರು ನನಗೆ ತೋರಿಸುವರು. ಬಹುತರವಾಗಿ ಅನೇಕ ಪತ್ರಗಳು ಉತ್ತರ ಕೊಡುವಷ್ಟು ಯೋಗ್ಯತೆಯುವಿರುವದಿಲ್ಲ. ಆದರೆ ಸಾರ್ವಜನಿಕ ದೃಷ್ಟಿಯಿಂದ ಮಹತ್ವವಿದ್ದ ಪ್ರಶ್ನೆಗಳಿಗೆ 'ಹರಿಜನ' ಮುಖಾಂತರ ಉತ್ತರಿಸಲಾಗುವದು. ವೈಯಕ್ತಿಕ ಪತ್ರವ್ಯವಹಾರವನ್ನು ಕಠೋರವಾಗಿ ಪರಿಮಿತಗೊಳಿಸಬೇಕಾಗಿದೆ. ಮದುಮಕ್ಕಳಿಗೆ ಆಶೀರ್ವಾದ ಕಳಿಸಬೇಕೆಂದು ಅನೇಕ ವಿನಂತಿಗಳು ಬರುತ್ತವೆ. ಹಾಗೆ ಆಶೀರ್ವಾದ ಕಳಿಸಲು ನನಗೆ ಒಪ್ಪಿಗೆ ಇಲ್ಲ. ಮದುಮಕ್ಕಳಲ್ಲಿ ಒಬ್ಬರಾದರೂ ಹರಿಜನರಿದ್ದರೆ ನನ್ನ ಆಶೀರ್ವಾದ ಬಯಸಬೇಕೆಂದು ಸಾರ್ವಜನಿಕವಾಗಿ ಹೇಳಿರುವೆನು. ಅದಾಗ್ಯೂ ನಿಜವಾಗಿ ನೋಡಿದಲ್ಲಿ, ನನ್ನ ಆಶೀರ್ವಾದದ ಅವಶ್ಯಕತೆಯಲ್ಲಿ? ಸಂಯುಕ್ತ ಸೇವೆಗಾಗಿ ಸತಿಪತಿಗಳಾಗ ಬಯಸುವವರಿಗೆ ಅವರದೇ ಆಶೀರ್ವಾದದ ಬಲವಿರುತ್ತದೆ. ಸ್ವ-ತೃಪ್ತಿಗೆ ಮದುವೆಯಾಗುವವರು ಆಶೀರ್ವಾದಕ್ಕೆ ಅನರ್ಹರಿರುವರು. ಏನಾದರೂ ಇಂದಿನ ಬರಗಾಲ ಪರಿಸ್ಥಿತಿಯಲ್ಲಿ ಮೇಜವಾನಿ, ಮನೋರಂಜನೆಗಳಿಗೆ ಹಣ ದುಂದುಮಾಡತಕ್ಕದ್ದಲ್ಲ. ಮದುವೆಗಳು ನಡೆಯಬಹುದು. ಆದರೆ ವಿಶೇಷ ಆಡಂಬರವಿಲ್ಲದೆ ಜರಗುವದು ಸಾಧ್ಯವಿಲ್ಲವೇ?

ಸಿಮುಲಾ, — ಮೋ. ಕ. ಗಾಂಧಿ
೬—೫—೪೬ — [ಹರಿಜನಬಂಧುವಿನಿಂದ]

## ಪಾನ ಕೂಟಗಳು

ನಾವೀಗ ಸ್ವಾತಂತ್ರ್ಯವನ್ನು ಸಮೀಪಿಸಿದಂತೆ ತೋರುತ್ತದೆ. ಹಾಗಾದರೆ ಯುರೋಪಿಯನರ ಕೆಟ್ಟ ಪದ್ಧತಿಗಳಿಗೆ ಅಂಟಿಕೊಂಡು ಸ್ವಾತಂತ್ರ್ಯ ಫಲ ಬಯಸುವದು ಯೋಗ್ಯವೇ? ಪಾನ ಕೂಟಗಳು ಮತ್ತು ತತ್ಸಮಾನ ಸಮಾರಂಭಗಳೇ ಸ್ವಾತಂತ್ರ್ಯೋತ್ಸವದ ನಿದರ್ಶನಗಳಾದರೆ ಹಿಂದುಸ್ತಾನಕ್ಕೆ ಮತ್ತು ಪ್ರಪಂಚಕ್ಕೆ ಅದು ದುರ್ದಿನವಾದೀತು. ಬರಗಾಲ ಪೀಡಿತರಾದ ಲಕ್ಷಾಂತರ ಜನರಿಗೆ ಈ ಕೂಟಗಳ ವಿಷಯಕ್ಕೆ ಏನು ಗೊತ್ತು? ಬಡವರು ಬರಗಾಲದಿಂದ ಬಳಲುತ್ತಿರುವಾಗ ಅವರಿಂದ ಧನಿಕರಾದವರು ಸುಖೋಪಭೋಗಗಳಲ್ಲಿ ಲೋಲಾಡುತಿದ್ದರೆಂದು ಎನಿಸಿಕೊಳ್ಳುವದು ಬೇಡ.

ಸಿಮುಲಾ — ಮೋ. ಕ. ಗಾಂಧಿ
೮-೫-೪೬



# "ಈ ಚಿತ್ರ ಪೂರ್ಣವಾಗಿಲ್ಲ, ವಿವರಗಳು ಬೇಕು"

## ಬ್ರಿಟಿಶ ಸೂಚನೆಗಳ ಬಗ್ಗೆ ಕಾಂಗ್ರೆಸ ಕಾರ್ಯಸಮಿತಿಯ ಗೊತ್ತುವಳಿ

### ನಡುಗಾಲ ಸರಕಾರದ ಅಧಿಕಾರಗಳೇನು ?

ಕಾಂಗ್ರೆಸ್ ಕಾರ್ಯಸಮಿತಿಯ ಸಭೆ ತಾ. ೨೪ ಕ್ಕೆ ಕೊನೆಗೊಳ್ಳುವ ಮೊದಲು ಮಂತ್ರಿತ್ರಯ ರಾಯಭಾರದ ಯೋಜನೆಯನ್ನು ಕುರಿತು ೧೦೦೦ ಶಬ್ದಗಳುಳ್ಳ ಗೊತ್ತುವಳಿಯೊಂದನ್ನು ಸ್ವೀಕರಿಸಿತು. ಅದರಲ್ಲಿ ಅದು ಮಂತ್ರಿತ್ರಯರ ಯೋಜನೆಯಲ್ಲಿಯ ಆಕ್ಷೇಪಾರ್ಹ ಅಂಶಗಳು ಕೆಲವನ್ನು ಎತ್ತಿ ತೋರಿಸಿ, "ಈಗ ಸೂಚಿಸಲ್ಪಟ್ಟಿರುವ ತಾತ್ಪೂರ್ತಿಕ ಸರಕಾರದ ಸಂಪೂರ್ಣ ಚಿತ್ರ ದೊರೆತ ಹೊರತು ಕಾರ್ಯ ಸಮಿತಿಯವರು ಮಂತ್ರಿತ್ರಯ ಯೋಜನೆಯನ್ನು ಕುರಿತು ಯಾವುದೇ ನಿರ್ದಿಷ್ಟ ಅಭಿಪ್ರಾಯವನ್ನು ಕೊಡಲು ಅಸಮರ್ಥರಾಗಿರುವರು" ಎಂದು ಸೂಚಿಸಿದೆ.

" ಯೋಜನೆಯನ್ನು ಪರಿಶೀಲಿಸುವಲ್ಲಿ, ತಾತ್ಪೂರ್ತಿಕ (ನಡುಗಾಲ) ಸರಕಾರದ ರಚನೆಯನ್ನು ಕುರಿತು ಯೋಜನೆಯಲ್ಲಿ ಕಾಣಸಿಕ್ಕಿದ ಅಂಶಗಳಿಂದಲೂ ರಾಯಭಾರದ ಸದಸ್ಯರು ಒದಗಿಸಿದ ವಿವರಣೆಗಳಿಂದಲೂ ಎಷ್ಟು ಸಾಧ್ಯವೋ ಅಷ್ಟುಮಟ್ಟಿಗೆ ಭವಿಷ್ಯತ್ತಿನ ಚಿತ್ರವನ್ನು ಕಣ್ಣ ಮುಂದರಿಸಿಕೊಂಡು ಕಾರ್ಯ ಸಮಿತಿ ವಿಚಾರಿಸಿದೆ. ಈ ಚಿತ್ರ ಇನ್ನೂ ಅಪೂರ್ಣವೂ ಅಸ್ಪುಟವೂ ಆಗಿದೆ. ಪೂರ್ಣ ಚಿತ್ರವನ್ನು ನೋಡಿದರೆನೇ ಅದು ತಾವು ಉದ್ದೇಶಿಸಿದ ಗುರಿಗೆ ಎಷ್ಟು ಮಟ್ಟಿಗೆ ಹೊಂದಿಕೆಯಾಗುವದೆಂದು ಕಾರ್ಯ ಸಮಿತಿ ಸದಸ್ಯರು ತೀರ್ಮಾನಿಸಬಲ್ಲರು. ಈ ಗುರಿಗಳೆಂದರೆ ಹಿಂದುಸ್ತಾನದ ಸ್ವಾತಂತ್ರ್ಯ ಪರಿಮಿತಾಧಿಕಾರವುಳ್ಳದಾದ್ದರೂ ಪ್ರಬಲವಾದ ಕೇಂದ್ರ ಸರಕಾರ, ಪ್ರಾಂತಗಳಿಗೆ ಪೂರ್ಣ ಸ್ವಾಯತ್ತತೆ, ಕೇಂದ್ರದಲ್ಲಿಯೂ ಪ್ರಾಂತಗಳಲ್ಲಿಯೂ ಪ್ರಜಾತಂತ್ರಾತ್ಮಕ ಕಟ್ಟುಪಾಡಿನ ಸ್ಥಾಪನೆ, ಪ್ರತಿಯೊಬ್ಬ ವ್ಯಕ್ತಿಗೂ ಪೂರ್ಣ ಮತ್ತು ಸಮಾನವಾದ ಅಭ್ಯುದಯಕ್ಕೆ ಅವಕಾಶವಿರುವಂತೆ ಮೂಲಭೂತ ಹಕ್ಕುಗಳ ಭರವಸೆ, ಮತ್ತು ಪ್ರತಿಯೊಂದು ಸಮಾಜಕ್ಕೂ ವಿಶಾಲತರ ಕಟ್ಟುಪಾಡಿನಲ್ಲಿ ತನ್ನ ಇಚ್ಛೆಯಂತೆ ಬಾಳುವ ಅವಕಾಶ ಇವು.

ಈ ಧ್ಯೇಯಗಳಿಗೂ ಬ್ರಿಟಿಶ ಸರಕಾರದವರು ಮಾಡಿರುವ ಸೂಚನೆಗಳಲ್ಲಿರುವ ವಿವಿಧ ಅಂಶಗಳಿಗೂ ಮೇಳಗೂಡುವದಿಲ್ಲವೆಂದು ಕಂಡು ಸಮಿತಿಗೆ ವಿಷಾದವಾಗುತ್ತದೆ. ಮುಖ್ಯವಾಗಿ ಘೋಷಣೆಯ ೨೩ ನೆ ಕಲಮಿನಲ್ಲಿ ಕೊಟ್ಟಿರುವ ಭರವಸೆಯಿದ್ದರೂ ಮಧ್ಯಕಾಲದಲ್ಲಿ, ತಾತ್ಪೂರ್ತಿಕ ಸರಕಾರದ ಆಳಿಕೆಯ ಸಮಯ, ಯಾವದೇ ಮೂಲಭೂತ ಬದಲಾವಣೆಯನ್ನು ಉದ್ದೇಶಿಸಿದಂತೆ ಕಾಣುವದಿಲ್ಲ. ಹಿಂದುಸ್ತಾನದ ಸ್ವಾತಂತ್ರ್ಯವೇ ಗುರಿಯಾಗಿದ್ದರೆ ತಾತ್ಪೂರ್ತಿಕ ಸರಕಾರಕ್ಕೆ ಕಾಯಿದೆಯಿಂದಲ್ಲದಿದ್ದರೂ ವಾಸ್ತವತೆಯಲ್ಲಿ ಆ ಸ್ವಾತಂತ್ರ್ಯಕ್ಕೆ ಹತ್ತಿರ ಹತ್ತಿರವಾದ ಅಧಿಕಾರವಿರಬೇಕು. ವಿದೇಶಿ ಸೈನ್ಯವೊಂದು ಇನ್ನೂ ದೇಶದಲ್ಲಿ ತಳವೂರಿರುವದು ಸ್ವಾತಂತ್ರ್ಯದ ನಿರಾಕರಣೆಯೇ ಸರಿ.

ತಾತ್ಪೂರ್ತಿಕ ರಾಷ್ಟ್ರೀಯ ಸರಕಾರಕ್ಕೆ ಹೊಸ ತಳಹದಿಯೆ ಇರಬೇಕು. ಅದು ಘಟನಾ ಸಮಿತಿಯಿಂದ ಉದ್ಭವಿಸಲಿರುವ ಪೂರ್ಣ ಸ್ವಾತಂತ್ರ್ಯದ ಪೂರ್ವ ಸಂದೇಶವಾಹಕವಾಗಿರಬೇಕು. ಈಗಳೆ ಕಾಯಿದೆಯಲ್ಲಿ ಬದಲಾವಣೆ ಮಾಡುವದು ಅವಶ್ಯವಿಲ್ಲದಿದ್ದರೂ ಆ ಸರಕಾರ ಆ ಸ್ವಾತಂತ್ರ್ಯದ ಅಂಗೀಕಾರದ ತಳಹದಿಯಲ್ಲಿಯೆ ಕೆಲಸ ಮಾಡಬೇಕು. ಮಧ್ಯಕಾಲದಲ್ಲಿ ಗವ್ಹರ್ನರ ಜನರಲ್ಲರೇ ಸರಕಾರದ ಮುಖ್ಯಸ್ಥರಾಗಿರಬಹುದು. ಆದರೆ ಸರಕಾರ ಮಾತ್ರ ಕೇಂದ್ರ ಶಾಸನ ಸಭೆಗೆ ಹೊಣೆಗಾರವಾದ ಮಂತ್ರಿಮಂಡಲದ ಮೂಲಕ ಸಾಗಬೇಕು. ತಾತ್ಪೂರ್ತಿಕ ಸರಕಾರದ ಸ್ಥಾನಮಾನ, ಅಧಿಕಾರ, ರಚನೆ ಸ್ಪಷ್ಟವಾಗಿ ನಿರೂಪಿಸಲ್ಪಡಬೇಕು. ಆಗ ಕಾರ್ಯ ಸಮಿತಿಗೆ ತೀರ್ಮಾನಕ್ಕೆ ಬರಲು ಸಾಧ್ಯವಾಗುವದು. ಮಹತ್ವದ ಜಾತೀಯ ಪ್ರಶ್ನೆಗಳು ಎರಡೂ ಜಾತಿಗಳ ಪ್ರತ್ಯೇಕ ಬಹುಮತದಿಂದ ನಿರ್ಣಯಿಸಲ್ಪಡಬಹುದು. ಇದರಿಂದ ಅಲ್ಪಸಂಖ್ಯಾಕರ ಮನಸಿನಲ್ಲಿರಬಹುದಾದ ಸಂಶಯ ಭಯಗಳು ದೂರವಾಗುವವು.

ಇದಲ್ಲದೆ ಬಂಗಾಲದಲ್ಲಿ ಯುರೋಪಿಯನ್ ಸದಸ್ಯರನ್ನೂ ಬಲುಚಿಸ್ತಾನದಿಂದ ಸರಕಾರದ ನಾಮಕರಣ ಸದಸ್ಯರನ್ನೂ ಆರಿಸುವದಕ್ಕೆ ಆಕ್ಷೇಪಿಸಿ ಕೊಡಗಿನ ಕೌನ್ಸಿಲ್ಲಿನ ಲೋಕನಿಯುಕ್ತ ಸದಸ್ಯರು ಮಾತ್ರ ಘಟನಾ ಸಮಿತಿಯ ಚುನಾವಣೆಯಲ್ಲಿ ಭಾಗ ವಹಿಸಬೇಕೆಂದು ಕಾರ್ಯ ಸಮಿತಿ ಅಭಿಪ್ರಾಯಪಟ್ಟಿದೆ.

ಒತ್ತಾಯದಿಂದ ಕೆಲವೊಂದು ಪ್ರಾಂತವನ್ನು ವಿಶಿಷ್ಟ ಗುಂಪಿಗೆ ಸೇರಿಸಲಾಗುವದೆಂದು ಭಾವಿಸಲು ಮಂತ್ರಿತ್ರಯರ ಯೋಜನೆಯಲ್ಲಿ ಅವಕಾಶವಿದೆ. ಆಯಾ ಪ್ರಾಂತಗಳ ಸಮ್ಮತಿಯಿಲ್ಲದೆ ಆ ಗುಂಪಿನಲ್ಲಿ ಯಾವೊಂದು ಪ್ರಾಂತವನ್ನು ಸೇರಿಸುವದನ್ನು ಕಾರ್ಯ ಸಮಿತಿ ವಿರೋಧಿಸಿದೆ.

ಸಂಸ್ಥಾನಗಳಿಂದ ಘಟನಾ ಸಮಿತಿಗೆ ಬರುವ ಸದಸ್ಯರು ಹೆಚ್ಚುಕಡಿಮೆ ಪ್ರಾಂತಗಳಿಂದ ಬರುವಂಥವರ ರೀತಿಯಿಂದಲೇ ಆರಿಸಲ್ಪಡಬೇಕೆಂದೂ ಕಾರ್ಯಸಮಿತಿ ಅಭಿಪ್ರಾಯಪಟ್ಟಿದೆ. ಸಂಸ್ಥಾನಿಕರ ದಬ್ಬಾಳಿಕೆ ಇನ್ನೂ ಸಾಗಿದೆಯೆಂದು ಅದು ನೆನಪರಿಕೆ ಮಾಡಿಕೊಟ್ಟಿದೆ.



### ಅಂಚೆಯಿಂದ ತರಿಸಿಕೊಳ್ಳುವ ನಮ್ಮ ಚಂದಾದಾರರಲ್ಲಿ ವಿನಂತಿ

ಪತ್ರವ್ಯವಹಾರ ಮಾಡುವಾಗ್ಗೆ ಮತ್ತು ಮನಿಆರ್ಡರ ಕಳಿಸುವಾಗ್ಗೆ ನಿಮಗೆ ಬರುತ್ತಿದ್ದ ಪತ್ರಿಕೆಯ ಮೇಲಿನ ವಿಳಾಸದಲ್ಲಿ ನಾವು ಸೇರಿಸಿದ ನಂಬರ ಬರೆಯಬೇಕು. ನಂಬರ ಇಲ್ಲದ ಪತ್ರಕ್ಕೆ ಉತ್ತರ ಸಿಗಲಾರದು.

.ಅವಧಿ ಮುಗಿಯುವ ೧೫ ದಿನ ಮುಂಚೆಯೆ ನಾವು ನಮ್ಮ ಪದ್ಧತಿಯಂತೆ ವ್ಹಿ. ಪಿ. ಮಾಡುವೆವು. ಬೇಡಾದವರು ಮೊದಲೇ ನಮಗೆ ತಿಳಿಸಬೇಕು.

ತಿಂಗಳು, ಎರಡು ತಿಂಗಳು ಚಂದಾದಾರರಾಗಲಿಚ್ಛಿಸುವವರು ಮುಂಗಡ ಹಣ ಕಳಿಸಬೇಕು. ಅವರಿಗೆ ವ್ಹಿ. ಪಿ. ಯನ್ನು ಕಳಿಸಲಾಗುವದಿಲ್ಲ. ವಾರಪತ್ರಿಕೆ (ಕರ್ಮವೀರ) ಯನ್ನು ೬ ತಿಂಗಳಿಗಿಂತ ಕಡಿಮೆ ವ್ಹಿ. ಪಿ. ಮಾಡುವದಿಲ್ಲ. ಮೊದಲನ ವ್ಹಿ. ಪಿ. ಕಳಿಸಿದ ಪ್ರತಿಯನ್ನು ನಾವು ಲೆಕ್ಕಕ್ಕೆ ಹಿಡಿಯದೆ ನಿಮ್ಮಿಂದ ವ್ಹಿ. ಪಿ. ಹಣ ಬಂದು ನಮ್ಮ ಕೈಸೇರಿದ ನಂತರ ಪತ್ರಿಕೆಯನ್ನು ಕಳಿಸಲು ಪ್ರಾರಂಭಿಸಿ ಅಂದಿನಿಂದಲೆ ನಿಮ್ಮ ಅವಧಿಯನ್ನು ಗಣಿಸಲಾಗುವದು.

—ವ್ಯವಸ್ಥಾಪಕ
**ಕರ್ಮವೀರ, ಹುಬ್ಬಳ್ಳಿ.**

# ಕರ್ನಾಟಕ

## ಧಾರವಾಡ

ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಹೊಸ ಸಭೆ ಹುಬ್ಬಳ್ಳಿಯಲ್ಲಿ ಸೇರಿ, ನಾ ಶಾಸ್ತ್ರಿ, ಭುಲಾಭಾಯಿ, ಅಶ್ವತ್ಥರಾವ ಮಹಿಷಿ ಅವರ ನಿಧನ ಬಗ್ಗೆ ದುಃಖಪ್ರದರ್ಶನ, ಈಸೂರ ಕೈದಿಗಳ ಬಿಡುಗಡೆ ಬೇಡಿಕೆ, ೧೯೪೨ ರಲ್ಲಿ ಅಧಿಕಾರಿಗಳು ಮಾಡಿದ ಅತ್ಯಾಚಾರಗಳ ವಿಚಾರಣೆಗೆ ಅಧಿಕಾರೇತರ ಸಮಿತಿ ನಿಯಮಿಸಲು ಆಯಾ ಸರಕಾರಗಳಿಗೆ ಕೇಳುವದು, ಬ್ರಿಟಿಶ ಕರ್ನಾಟಕದ ಏಳ್ಗೆಗಾಗಿ ಕಾಯದೆ ಮಂಡಲಗಳಲ್ಲಿ ಕಾರ್ಯ ನಡೆಸಲು ಉಪಸಮಿತಿ ಸ್ಥಾಪನೆ. ಬರಗಾಲ ಕೆಲಸಗಾರರ ಕನಿಷ್ಟ ಕೂಲಿ ೮ ಆಣೆ, ಪರಮಾವಧಿ ಕೂಲಿ ೧ ರೂ ಗೊತ್ತು ಮಾಡಲು ಸರಕಾರಕ್ಕೆ ಬಿನ್ನವಿಸುವದು, ಹರಿಜನರ ಸಂಕಷ್ಟ ಕಾಯಿದೆಯಿಂದ ದೂರ ಮಾಡುವದು ಮೊದಲಾದ ನಿರ್ಣಯ ಸ್ವೀಕರಿಸಿತು.

ಅ ಭಾ ರೇಲ್ವೆ ಜನರ ಮಹಾಮಂಡಳದ ಆದೇಶದಂತೆ ಹುಬ್ಬಳ್ಳಿ ರೇಲ್ವೆ ಕೆಲಸಗಾರರು ತಾ ೨೦ ಕ್ಕೆ ರೇಲ್ವೆ ಕೆಲಸಗಾರರ ದಿನಾಚರಣೆಯನ್ನು ಸಭೆ ಮೆರವಣಿಗೆಗಳಿಂದ ಪಾಲಿಸಿದರು.

ಒಕ್ಕಲತನ ಮಂತ್ರಿಗಳಾದ ಶ್ರೀ ಎಂ ಪಿ ಪಾಟೀಲರು ತಾ ೧೭ ನೇ ದಿನ ಧಾರವಾಡ ಫಾರ್ಮಿಗೆ ಭೆಟ್ಟಿ ಕೊಟ್ಟು ಟ್ರಾಕ್ಟರ ಕಾರ್ಯ ಪರಿಶೀಲಿಸಿದರು. ಒಕ್ಕಲತನ ಕಾಲೇಜ ಶಿಷ್ಟಮಂಡಲದವರೊಡನೆಯೂ ಅವರ ಮಾತುಕತೆ ನಡೆಯಿತು.

ಅರಣ್ಯ ಮಂತ್ರಿಗಳಾದ ಶ್ರೀ ಎಂ ಪಿ ಪಾಟೀಲರು ಹುಬ್ಬಳ್ಳಿಗೆ ಆಗಮಿಸಿದಾಗ ಅರಣ್ಯ ಕಾಂಟ್ರಾಕ್ಟರ ಹಾಗು ಕಟ್ಟಿಗೆ ವ್ಯಾಪಾರಿಗಳು ಅವರನ್ನು ಕಂಡು ತಮ್ಮ ಅಡಚಣೆಗಳನ್ನು ನಿವೇದಿಸಿದರು. ವಾಗಿನ ಪೂರೈಸಬೇಕು, ರವಾನೆ ಮೇಲಿನ ನಿರ್ಬಂಧ ತೆಗೆದುಹಾಕಬೇಕು ಮುಂತಾಗಿ ಅವರ ಬೇಡಿಕೆಗಳಿದ್ದು ಬೇಗನೆ ವ್ಯವಸ್ಥೆ ಮಾಡುವದಾಗಿ ಮಂತ್ರಿಗಳು ಉತ್ತರವಿತ್ತರು.

ಹುಬ್ಬಳ್ಳಿ ನಗರ ಮತದಾರ ಸಂಘದಿಂದ ಕ. ಪ್ರಾಂ. ಕಾಂ ಕಮಿಟಿಗೆ ಆರಿಸಿ ಬಂದ ಶ್ರೀ ಬಿ ಎನ್ ಮುನವಳ್ಳಿಯವರ ಆಯ್ಕೆಯನ್ನು ಪಂಚಮಂಡಲದವರು ರದ್ದುಗೊಳಿಸಿ ಹೊಸ ಚುನಾವಣೆ ಜರುಗಿಸಬೇಕೆಂದು ನಿರ್ಣಯ ಕೊಟ್ಟಿದ್ದಾರೆ.

ಕರ್ನಾಟಕ ಹರಿಜನ ಸೇವಕ ಸಂಘದ ಅಧ್ಯಕ್ಷರಾದ ಶ್ರೀ ಎಫ್ ಡಿ ಘೋಡಕೆಯವರು ವಿಧಿಮಂಡಳದ ಸಭಾಸದರಾಗಿ ಸರಕಾರದಿಂದ ನಿಯುಕ್ತರಾಗಿದ್ದಾರೆ.

ಕರ್ನಾಟಕ ಪ್ರಾಂ ಕಾಂ ಕಮಿಟಿಯ ಕಾರ್ಯಕಾರಿ ಮಂಡಳದವರು ತಾ ೧೭ ನೇ ದಿನ ಹುಬ್ಬಳ್ಳಿಯಲ್ಲಿ ಸಭೆ ಸೇರಿ ಪಾರ್ಲಮೆಂಟರಿ ಬೋರ್ಡಿನ ವರದಿ ಹಾಗು ಲೆಕ್ಕ ಪತ್ರ ಸ್ವೀಕರಿಸಿದ್ದಲ್ಲದೆ ತಾ॥ ೧—೨—೪೭ ನೇ ದಿನ ಪಾರ್ಲಮೆಂಟರಿ ಬೋರ್ಡಿನ ಸಭೆಯಲ್ಲಿ ಸಭಾಸದರಲ್ಲದವರು ಹಲವರು ಬಂದು ಮಾಡಿದ ಅಸಭ್ಯವರ್ತನ ಬಗ್ಗೆ ಶಿಸ್ತುಕ್ರಮ ನೋಟೀಸು ಅವರಿಗೆ ಕಳಿಸಿದ್ದಕ್ಕೆ ಅವರಿಂದ ಬಂದ ಉತ್ತರ ಅತೃಪ್ತಿಕರವಿರುವದರಿಂದ ಮುಂದಿನ ಕಾರ್ಯಕಾರಿ ಮಂಡಲ ಸಭೆಯಲ್ಲಿ ಅದರ ವಿಚಾರ ಮಾಡಬೇಕೆಂದು ಗೊತ್ತು ಮಾಡಿದರು.

ಹೊಳೆಆಲೂರಲ್ಲಿ ಚರಖಾ ಸಂಘದವರು ಒಂದು ಪರಿಶ್ರಮಾಲಯ ತೆರೆದಿರುವರು.

ಶ್ರೀ ಥಕ್ಕರಬಾಪ್ಪಾ ಅವರು ಕೊಣ್ಣೂರ ನರಗುಂದಗಳಿಗೆ ಭೆಟ್ಟಿ ಕೊಟ್ಟು ಬರಗಾಲ ಪರಿಸ್ಥಿತಿ ಪರಿಶೀಲಿಸಿ ಕಲೆಕ್ಟರರನ್ನು ಕಂಡು ಮಾತುಕತೆ ನಡೆಸಿದರು.

## ಬಳ್ಳಾರಿ ಜಿಲ್ಹೆ

ಪ್ರಾಂತಿಕ ಶಿಕ್ಷಣ ಪರಿಷತ್ತಿನ ಕಾರ್ಯ ಮುಗಿಸಿಕೊಂಡು ಪರಿಷತ್ತಿನ ಅಧ್ಯಕ್ಷರಾದ ಎಂ ಎಸ್ ಪುಟ್ಟಣ್ಣಬರರಾಯರು ೬೦ ಪ್ರತಿನಿಧಿಗಳೊಂದಿಗೆ ಹಂಪಿಗೆ ಹೋಗಿ ಅಲ್ಲಿಯ ಐತಿಹಾಸಿಕ ಸ್ಥಳಗಳನ್ನು ನೋಡಿದರು. ಆನೇಗುಂದಿ ರಾಜರು ದಯಪಾಲಿಸಿದ ಕೃಷ್ಣದೇವರಾಯರ ಪುತ್ಥಳಿ ಪ್ರತಿಷ್ಠಾಪನೆಯು ಅವರ ಹಸ್ತದಿಂದ ಜರುಗಿತು.

## ಬೆಳಗಾವಿ

ಸಿಂದಿ ತುಂಬಿಕೊಂಡು ಬರುತ್ತಿದ್ದ ಮೋಟಾರಿನ ಮೇಲೆ ತಾ. ೨೦ ನೇ ದಿನ ಯಾರೊ ಕೆಲವರು ಬೆಳಗಾವಿ ಕಾರ್ಪೊರೇಶನ ಕೆರೆ ಹತ್ತರ ದಾಳಿ ಮಾಡಿ ಎಲ್ಲ ಸಿಂದಿಯನ್ನು ರಸ್ತೆಗೆ ಚೆಲ್ಲಿದರು. ಇದರಂತೆ ಎರಡು ಸಿಂದಿ ಸಾಯಕಲ್ ಹಾಗು ಚಕ್ಕಡಿಗಳ ಮೇಲೂ ದಾಳಿ ಮಾಡಿ ಸಿಂದಿ ಉರುಳಿಸಿರುವರು.

ತಲ್ಲೂರಿನ ಜಂಗಲಿ ಮಾಸ್ತರರು ಎಲ್ಲ ಖಟ್ಲೆಗಳಲ್ಲಿ ನಿರ್ದೋಷಿಗಳಾಗಿ ಬಿಡುಗಡೆ ಹೊಂದಿರುವರು.

ಗೋಕಾಕ ತಾಲೂಕಿನಲ್ಲಿ ಯಾದವಾಡ ತಿಗಡಿ ಗೋಕಾಕಗಳಲ್ಲಿ ಜೀವದಯಾ ಸಂಘದ ವತಿಯಿಂದ ದನಗಳ ಛತ್ರ ತೆರೆಯುವದು ಗೊತ್ತಾಗಿದೆ.

ಒಕ್ಕಲತನ ಖಾತೆ ಮಂತ್ರಿಗಳಾದ ಶ್ರೀ ಎಂ ಪಿ ಪಾಟೀಲರು ತಾ ೧೮ ನೇ ದಿನ ಮುನವಳ್ಳಿಗೆ ಭೆಟ್ಟಿ ಕೊಟ್ಟರು. ಊರವರು ಪ್ರಚಂಡ ಸ್ವಾಗತ ಮಾಡಿ ಅವರಿಗೆ ಮಾನಪತ್ರಗಳನ್ನು ಸಮರ್ಪಿಸಿದರು. ಅನನುಕೂಲತೆ ದೂರು ಮಾಡುವ ಆಶಾಸನ ಮಂತ್ರಿಗಳಿತ್ತರು.

ಶ್ರೀ ಥಕ್ಕರಬಾಪ್ಪಾ ಅವರು ಬರಗಾಲ ಪ್ರದೇಶ ನಿರೀಕ್ಷಿಸಲು ಕರ್ನಾಟಕದಲ್ಲಿ ಕೈಕೊಂಡ ಪ್ರವಾಸದಲ್ಲಿ ತಾ ೨೦ ಕ್ಕೆ ಗುರ್ಲಹೊಸೂರಿಗೆ ಬಂದಿದ್ದರು. ಅವರ ಜೊತೆಯಲ್ಲಿ ರಾ ಬ ಮಾನಕರ, ಟಿ ಎಸ್ ಕೌಜಲಗಿ, ವೆಂಕಟರಾಮಯ್ಯ ಮೊದಲಾದವರಿದ್ದರು.

ಬೆಳಗಾವ ಜಿಲ್ಹಾ ಯುವಕ ಪರಿಷತ್ತು ಶ್ರೀ ಅರವಿಂದ ಬೋಸರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ಯಶಸ್ವಿಯಾಗಿ ಸಾಂಗವಾಯಿತು. ಜಗನ್ನಾಥರಾವ ಭೋಸಲೆಯವರು ಪರಿಷತ್ತಿನ ಉದ್ಘಾಟನ ಮಾಡಿದರು. ನಾನಾ ಪಾಟೀಲ ಹಾಗು ಅವರ ಪರಿವಾರದವರೂ ಆಗಮಿಸಿದ್ದರು. ಭೋಸಲೆಯವರಿಗೆ ನಾಗರಿಕರ ಪರವಾಗಿಯೂ ದೇ ಭ ಗಂಗಾಧರರಾಯರ ಅಧ್ಯಕ್ಷತೆಯಲ್ಲಿ ಸತ್ಕಾರ ಮಾಡಲಾಯಿತು. ಇನ್ನೂ ಒಂದು ಹೋರಾಟದ ಸಂಭವವಿದೆ ಅದಕ್ಕಾಗಿ ಸಿದ್ಧತೆ ನಡೆಸಬೇಕಾಗಿ ಅತಿಥಿಗಳು ಕೇಳಿಕೊಂಡರು.

## ವಿಜಾಪುರ

ಬಬಲೇಶ್ವರದಲ್ಲಿ ಸೇವಾದಲ ಸ್ಥಾಪಿತವಾಗಿದ್ದು ಊರ ಜನರು ಈಗ ೪೦ ರೂ. ಸಂಗ್ರಹಿಸಿ ಕೊಟ್ಟಿರುವರು.

ಒಕ್ಕಲತನ ಖಾತೆ ಮಂತ್ರಿಗಳು ತಾ. ೧೪ ಕ್ಕೆ ವಿಜಾಪುರಕ್ಕೆ ಭೆಟ್ಟಿ ಕೊಟ್ಟಾಗ ಶ್ರೀಯುತರಾದ ಸ್ವಾಮಿರಾವ ಕುಲಕರ್ಣಿ ವಕೀಲ, ಡಾ. ಕೊಟ್ಟಲಗಿ, ಸಜ್ಜನ ವಕೀಲ ಹಾಗು ದುಬೆಯವರು ಅವರನ್ನು ಕಂಡು ಈಗ ಹಾಕಲಾಗುತ್ತಿರುವ ಒಡ್ಡುಗಳು ಅಪಾಯಕಾರಕವಿವೆಯೆಂದೂ ಯಾವ ತರದ ಒಡ್ಡು ಹಾಕಬೇಕೆಂಬುದನ್ನು ನಿರ್ಣಯಿಸಲು ತಜ್ಞರ ಒಂದು ಕಮಿಟಿ ನಿಯಮಿಸಬೇಕೆಂದೂ ಕೇಳಿಕೊಂಡರು. ಒಡ್ಡಿನ ಅಧಿಕಾರಿಗಳಾದ ಸಾಸಮನ ಸಾಹೇಬರೂ ಹಾಜರಿದ್ದರು.

ಜೂನ ೨ ನೇ ವಾರದಲ್ಲಿ ವಿಜಾಪುರ ಜಿಲ್ಹಾ ಶಿಕ್ಷಣ ಪರಿಷತ್ತು ಕರೆಯಲು ಶ್ರೀಯುತರಾದ ಶಂಕರಗೌಡ ಪಡಗಾನೂರ ಹಾಗು ಗುಂಡೇರಾವ ದೇಶಪಾಂಡೆಯವರು ವಿಚಾರ ನಡೆಸಿದ್ದಾರೆ.

ಒಕ್ಕಲತನ ಹಾಗು ಅರಣ್ಯ ಖಾತೆ ಮಂತ್ರಿಗಳು ಆಚೆಯ ವಾರ ವಿಜಾಪುರಕ್ಕೆ ಭೆಟ್ಟಿಕೊಟ್ಟು ಒಡ್ಡಿನ ಕಾರ್ಯ ಪರಿಶೀಲಿಸಿದರು. ಮತ್ತು ಅಧಿಕಾರಿಗಳು ಹಾಗು ಅಧಿಕಾರೇತರರೊಡನೆ ಚರ್ಚೆ ಮಾಡಿದರು. ಜಿಲ್ಹಾ ಕಾಂಗ್ರೆಸ ಕಮಿಟಿ ಪರವಾಗಿ ಅವರ ಸಾರ್ವಜನಿಕ ಭಾಷಣವೂ ಆಯಿತು.

ಒಕ್ಕಲತನ ಮಂತ್ರಿಗಳಾದ ಶ್ರೀ ಎಂ ಪಿ ಪಾಟೀಲರು ಹುಬ್ಬಳ್ಳಿಗೆ ಹೋಗುವಾಗ್ಗೆ ಬಾಗಲಕೋಟ ಸ್ಟೇಶನದಲ್ಲಿ ಅವರಿಗೆ ಸ್ವಾಗತವಾಗಿ ೨೦ ಸಂಸ್ಥೆಗಳ ಪರವಾಗಿ ಪೂಮಾಲೆ ಸಲ್ಲಿಸಲಾಯಿತು. ಒಡ್ಡಿನ ಸಂಬಂಧದಲ್ಲಿ ವಿಚಾರ ಮಾಡಲು ಸಮಿತಿ ನಿಯಮಿಸುವದಾಗಿ ಅವರು ಹೇಳಿದರು.

ವಿಜಾಪುರ ಪಿ ಡಿ ಜೆ ಹಾಯಸ್ಕೂಲಿನ ಎನ್ ವ್ಹಿ ಕುಲಕರ್ಣಿಯವರು ಹಿಂದುಸ್ತಾನಿ ಪರೀಕ್ಷೆಯಲ್ಲಿ ಮೂರನೇ ಬಹುಮಾನ ಪಡೆದಿದ್ದಾರೆ.

## ಉತ್ತರ ಕನ್ನಡ

ಗೋವೆಯಿಂದ ಕಳ್ಳತನದಿಂದ ೧೨೫ ಗ್ಯಾಲನ್ ಸೆರೆ ತಂದ ಬಗ್ಗೆ ಕಾರವಾರ ಸಮುದ್ರ ಗಸ್ತಿ ಪೋಲೀಸರು ತಾಡಿ ಬಂದರದಲ್ಲಿ ೯ ಜನರನ್ನು ಬಂಧಿಸಿದ್ದಾರೆ.

ಜಿಲ್ಹಾ ಕಿಸಾನ ಸಂಘದ ಅಧ್ಯಕ್ಷ ಕಾರ್ಯದರ್ಶಿ ಮತ್ತು ಇತರರ ಮೇಲೆ ತೆಗೆದುಕೊಂಡ ಕಾಯದೆ ಕ್ರಮವನ್ನು ಸದ್ಯಕ್ಕೆ ತಡೆಹಿಡಿಯಬೇಕೆಂದು ಜಿಲ್ಹಾ ಮ್ಯಾಜಿಸ್ಟ್ರೇಟರಿಗೆ ಸರಕಾರದವರು ತಿಳಿಸಿದ್ದಾರೆ.

ಕಾರವಾರ ರಾಷ್ಟ್ರ ಸೇವಾದಲ ಸೈನಿಕರು ತಾ. ೧೯ ನೇ ದಿನ ಸಿನೇಮಾ ಮಂದಿರದಲ್ಲಿ ಹಿಂದು ಮುಸಲ್ಮಾನ ಒಕ್ಕಟ್ಟು ರಚನಾತ್ಮಕ ಕಾರ್ಯಕ್ರಮ ಮೊದಲಾದವುಗಳಿಗೆ ಸಂಬಂಧಿಸಿದ ಹಾಡು, ಹಾಸ್ಯ ಲಾವಣಿ ಮೊದಲಾದ ಕಾರ್ಯಕ್ರಮ ಮಾಡಿ ತೋರಿಸಿದರು. ಕೂಡಿದವರು ಸುಮಾರು ೨೦೦ ರೂಪಾಯಿಗೆ ಮಿಕ್ಕ ಧನ ಸಹಾಯ ಮಾಡಿದರು.

ಸಂಪು ಹೂಡಿದ್ದ ಸಿರ್ಸಿಯ ಶಂಕರ ನಾರಾಯಣ ಭಟ್ಟ ಎಂಬ ಶಿಕ್ಷಕರನ್ನು ಏ ಓ ರವರು ಇನ್ನೂ ಪುನಃ ಹಾಜರಪಡಿಸಿಕೊಂಡಿರುವದಿಲ್ಲವಾಗಿ ತಕರಾರು ಬಂದಿದೆ.

## ಸಂಸ್ಥಾನಗಳು

ನಾನಾ ಪಾಟೀಲ ಹಾಗು ಅವರ ಪರಿವಾರದವರಿಗೆ ಕೊಲ್ಹಾಪುರದಲ್ಲಿ ಅಪೂರ್ವ ಸ್ವಾಗತವಾಗಿ ಖಾಸಭಾಗದಲ್ಲಿ ಅವರ ಭಾಷಣವಾಯಿತು.

ಓರಿ ಕುರುಂದವಾಡ ಶಾಸನ ಸಭೆ ಅಧಿವೇಶನವು ಜೂನ ೧೭ ಕ್ಕೆ ಪ್ರಾರಂಭವಾಗಲಿದ್ದು ರಾಜೇಸಾಹೇಬರು ಅಧಿವೇಶನದಲ್ಲಿ ಸಂಸ್ಥಾನಕ್ಕೆ ಜವಾಬದಾರಿ ರಾಜ್ಯ ಪದ್ಧತಿ ದಯಪಾಲಿಸಿದ್ದನ್ನು ಜಾಹೀರ ಮಾಡುವರೆಂದು ತಿಳಿಯುತ್ತದೆ.

# ಹಿಂದುಸ್ತಾನ

## ಮುಂಬಯಿ

ಅಹಮ್ಮದಾಬಾದದಲ್ಲಿಯ ಕೃಪಾಣ ಸಂರಕ್ಷಣ ಸಮಿತಿಯವರು ಸರಕಾರದೊಡನೆ ಮಾತುಕತೆಗೆ ತಮ್ಮ ಧುರೀಣರಿಗೆ ಅವಕಾಶ ಕೊಡಲು ಸತ್ಯಾಗ್ರಹವನ್ನು ೧ ವಾರ ಹಿಲ್ಲಿಸಿದ್ದಾರೆ.

ಮುಂಬಯಿ ಶಾಸನ ಸಭೆಗೆ ಕಾಂಗ್ರೆಸ ಪಕ್ಷದ ಶ್ರೀ ಫಿರೋದಿಯಾ ಅವರು ಅಧ್ಯಕ್ಷರಾಗಿಯೂ ಬೆಳಗಾವಿಯ ಶ್ರೀ ಷಣ್ಮುಖಪ್ಪ ಅಂಗಡಿಯವರು ಉಪಾಧ್ಯಕ್ಷರಾಗಿಯೂ ಕಳೆದವಾರ ಕೂಡಿದ ಮೊದಲನೇ ಅಧಿವೇಶನದಲ್ಲಿ ಆರಿಸಲ್ಪಟ್ಟರು.

ಮುಂಬಯಿ ಪೋಲೀಸ ಕಮೀಶನರರು ಮುಂಬಯಿ ಕಿಲ್ಲೆಯಲ್ಲಿ ೧೫ ದಿನಗಳ ವರೆಗೆ ಸಭೆ ಮೆರವಣಿಗೆಗಳನ್ನು ಪ್ರತಿಬಂಧಿಸಿದ್ದಾರೆ.

ಇಂಡೋನೇಶಿಯಾದವರು ಹಿಂದುಸ್ತಾನಕ್ಕೆ ೫ ಲಕ್ಷ ಟನ್ ಅಕ್ಕಿ ಕೊಡಮಾಡಿದ್ದರ ಸಂಬಂಧದಲ್ಲಿ ಅಲ್ಲಿಯ ಮುಖ್ಯ ಪ್ರಧಾನರಾದ ಶಾರೀರರೊಡನೆ ಮಾತುಕತೆ ನಡೆಸಲು ಜವಾಹರರ ಸಲಹೆ ಮೇರೆಗೆ ಮುಂಬಯಿ ಅಹಾರ ಮಂತ್ರಿಗಳಾದ ದಿನಕರರಾವ ದೇಸಾಯಿಯವರು ವಿಮಾನದಿಂದ ಹೋಗಲಿದ್ದಾರೆ.

ಗುಜರಾಥ ಪ್ರಾಂತಿಕ ಕಾಂಗ್ರೆಸ ಕಮೀಟಿಗೆ ಕಳೆದ ೨೫ ವರ್ಷಗಳಿಂದ ಅಧ್ಯಕ್ಷರಾಗಿದ್ದ ಸರದಾರ ವಲ್ಲಭಭಾಯಿಯವರು ಅಧ್ಯಕ್ಷ ಪದದಿಂದ ನಿವೃತ್ತರಾದ್ದರಿಂದ ಅವರ ಸ್ಥಳದಲ್ಲಿ ಕಾನಜೀಭಾಯಿ ದೇಸಾಯರು ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ ಕಮೀಟಿಗೆ ಕೆ ಎಂ ಜೇಧೆಯವರು ಸರ್ವಾನುಮತದಿಂದ ಅಧ್ಯಕ್ಷರಾದರು.

ಮುಂಬಯಿಯಲ್ಲಿ ದಿವಂಗತ ಶ್ರೀನಿವಾಸ ಶಾಸ್ತ್ರಿ ಹಾಗು ರವೀಂದ್ರನಾಥ ಟಾಗೋರರ ಸ್ಮಾರಕ ಭವನಗಳನ್ನು ಕಟ್ಟಿಸಲು ನಿಧಿ ಶೇಖರಿಸಲು ಸರ್ ಚಿಮಣಲಾಲ ಸೆಟಲವಾಡ ಹಾಗು ಬಿ. ಜಿ. ಖೇರ ಇವರ ಅಧ್ಯಕ್ಷತೆಯಲ್ಲಿ ಕಮೀಟಿಗಳನ್ನು ಏರ್ಪಡಿಸಲಾಗಿದೆ.

ಪುಣೆ ನಗರ ಸಭೆಯ ಹೊಸ ಕಟ್ಟಡದ ಶಂಕುಸ್ಥಾಪನೆಯು ತಾ. ೧೬ ನೇ ದಿನ ಮಂತ್ರಿಗಳಾದ ಶ್ರೀ ಎಲ್. ಎಂ. ಪಾಟೀಲರ ಹಸ್ತದಿಂದ ಜರುಗಿತು.

## ಮದ್ರಾಸ

ಕಾಲಿಕತ್ತದ ಕಮ್ಯುನಿಸ್ಟರಾದ ಕೃಷ್ಣ ಪಿಳ್ಳೆಯವರ ಮೇಲಿನ ಗಡಿಪಾರಾಜ್ಞೆಯನ್ನು ಸರಕಾರವು ರದ್ದುಪಡಿಸಿದೆ.

ಸರ ಹೆನ್ರಿ ನಾಯಿಟರು ಹಿಂದುಸ್ತಾನ ಸರಕಾರದಿಂದ ದಕ್ಷಿಣದಲ್ಲಿ ಆಹಾರ ಪೂರೈಕೆ ಸಂಘಟನಾಧಿಕಾರಿಗಳಾಗಿ ನೇಮಕ ಹೊಂದಿದ್ದು ಬೆಂಗಳೂರಲ್ಲಿ ಅವರ ಮುಖ್ಯ ಕಚೇರಿ ಸ್ಥಾಪಿತವಾಗುವದು. ಮದ್ರಾಸ, ಮುಂಬಯಿ, ಹೈದರಾಬಾದ, ಮೈಸೂರ ತಿರುವಾಂಕೂರ ಹಾಗು ಕೋಚೀನ ಇವು ಅವರ ಅಧಿಕಾರದಲ್ಲಿ ಬರುವವು.

ಎ. ಆಯ. ಸಿ. ಸಿ. ಗೆ ಶ್ರೀ ಸಿ. ರಾಜಗೋಪಾಲಾಚಾರ್ಯರು ಪ್ರಚಂಡ ಮತಾಧಿಕ್ಯದಿಂದ ಆರಿಸಿ ಬಂದಿರುವರು.

ಆಂಧ್ರ ಪ್ರಾಂ. ಕಾಂ. ಕಮೀಟಿಗೆ ಪ್ರೊ. ರಂಗಾರವರೂ ತಮಿಳನಾಡು ಪ್ರಾಂ. ಕಾಂ. ಕಮೀಟಿಗೆ ಕಾಮರಾಜ ನಾಡರರೂ ಕೇರಳ ಕಾಂಗ್ರೆಸ ಕಮೀಟಿಗೆ ಶ್ರೀ ಕೆಲಪ್ಪನರೂ ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು.

ಅಗಸ್ಟ ಚಳವಳಿ ಮೂಲಕ ನೌಕರಿ ಕಳಕೊಂಡ ಶಿಕ್ಷಕರನ್ನು ಸರಕಾರದವರು ಪುನಃ ನೇಮಿಸಿಕೊಳ್ಳ [illegible]ರ್ಧರಿಸಿದ್ದಾರೆ.

ಮದ್ಯ ಪ್ರತಿಬಂಧವು ಈ ಸಲ ಬಳ್ಳಾರಿ ಅನಂತಪುರ ಜಿಲ್ಲೆಗಳಿಗೂ ವಿಸ್ತರಿಸಲ್ಪಡುವದು.

## ಹೊಸದಿಲ್ಲಿ

ದಿಲ್ಲಿ ರಾಮಲೀಲಾ ಬೈಲಿನ ಬಳಿಯಲ್ಲಿ ತಾ. ೨೦ ನೇ ದಿನ ಹಿಂದು ಮುಸಲ್ಮಾನ ಹೊಡೆದಾಟ ಸಂಭವಿಸಿ ಇಬ್ಬರು ಸತ್ತಿದ್ದು ೮ ಜನರು ಗಾಯಗೊಂಡಿರುವರು. ಹುಡುಗರಲ್ಲಿಯ ಆಟದ ಜಗಳವು ವಿಕೋಪಕ್ಕೆ ಹೋಗಿ ಗಲಭೆಯಲ್ಲಿ ಪರಿಣಮಿಸಿತು.

ಕರಾಚಿ ಸೆಕ್ರೆಟರಿಯೇಟ ಹತ್ತರ ನಿಲ್ಲಿಸಲಾದ ಮಹಾತ್ಮರ ಪುತ್ಥಳಿಯ ಅನಾವರಣ ಜರುಗಿಸಲು ಅಲ್ಲಿಯ ವಣಿಕ ಸಂಘದವರು ಭಾರತ ಮಂತ್ರಿಗಳನ್ನು ಆಮಂತ್ರಿಸಿದ್ದಾರೆ.

ಬಟ್ಟೆ ಉತ್ಪಾದನವು ಕಡಿಮೆಯಾದ್ದರಿಂದ ಸರಕಾರದವರು ಜೂನದಿಂದ ಬಟ್ಟೆ ಪ್ರಮಾಣದಲ್ಲಿ ೧೦೦ ಕ್ಕೆ ೧೦ ರಷ್ಟು ಕಡಿತ ಮಾಡಲಿದ್ದಾರೆ.

ಅ ಭಾ ಮುಸ್ಲಿಂಲೀಗ ಕಾರ್ಯಕಾರಿ ಮಂಡಲದ ಸಭೆಯು ತಾ. ೩ ನೇ ದಿನ ದಿಲ್ಲಿಯಲ್ಲಿ ಕೂಡುವದು.

ಸಿ. ಆಯ. ಡಿ. ಶಾಖೆಗಳಿಗೆ ಬಂಧಮುಕ್ತ ಹಿಂ ರಾ ಸೈನಿಕರ ಚಟುವಟಿಕೆಗಳ ಮೇಲೆ ಕಣ್ಣಿಡಲು ಸರಕಾರವು ಕೇಳಿಕೊಂಡಿರುವದು.

## ಮಧ್ಯಪ್ರಾಂತ

ಕೇಂದ್ರ ಸರಕಾರದವರು ಜಬಲಪುರದಲ್ಲಿ ೭೦ ಲಕ್ಷ ರೂ. ವೆಚ್ಚಮಾಡಿ ದನಗಳ ಪೀಳಿಗೆ ಸುಧಾರಿಸುವ ಕೇಂದ್ರ ತೆರೆಯಲಿರುವರು.

ಮಹಾಕೋಸಲ ಪ್ರಾಂ. ಕಾಂ. ಕಮೀಟಿಗೆ ಸೇಟ ಗೋವಿಂದದಾಸರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

ನಾಗಪುರದಲ್ಲಿ ಜೂನದಿಂದ ಸರಕಾರಿ ಮೆಡಿಕಲ್ ಕಾಲೇಜು ಪ್ರಾರಂಭಿಸಲ್ಪಡುವದು.

ಆಹಾರ ಮಂತ್ರಿಗಳಾದ ಆರ್. ಕೆ. ಪಾಟೀಲರು ೩ ನೇ ವರ್ಗದಲ್ಲಿ ಪ್ರವಾಸ ಮಾಡುವದು, ಹಿಂದಿಯಲ್ಲಿ ಅಭಿಪ್ರಾಯ ಬರೆಯುವದು ಮೊದಲಾದವುಗಳಿಂದ ಜನತೆಯನ್ನು ಆಕರ್ಷಿಸಿಕೊಂಡಿದ್ದಾರೆ.

ಪು ಯ ದೇಶಪಾಂಡೆಯವರನ್ನು ಹಾಯಕೋರ್ಟಿನವರು ಬಿಡುಗಡೆ ಮಾಡಿದ್ದರ ವಿರುದ್ಧ ಸರಕಾರವು ಮಾಡಿದ ಅಪೀಲನ್ನು ಪ್ರಿವ್ಹಿ ಕೌನ್ಸಿಲವು ಕಿತ್ತಿ ಒಗೆದಿರುವದು. ಸರಕಾರಿ ತಿಜೋರಿ ಲೂಟಿ ಆರೋಪ ಹೊರಿಸಿ ಹಿಂ. ಸಂ. ಕಾಯದೆ ಅನ್ವಯ ದೇಶಪಾಂಡೆಯವರನ್ನು ಬಂಧಿಸಲಾಗಿತ್ತು.

## ಸಂಯುಕ್ತಪ್ರಾಂತ---ಪಂಜಾಬ

ಸಂಯುಕ್ತಪ್ರಾಂತ ಕಾಂಗ್ರೆಸ ಕಮೀಟಿಗೆ ತೀವ್ರವಾದಿಗಳಾದ ಸೇಟ ದಾಮೋದರ ಸ್ವರೂಪರು ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು.

ಸಾಗರೋತ್ತರಕ್ಕೆ ಹೋಗಲು ನಿರಾಕರಿಸಿದ್ದಕ್ಕೆ ದಂಡಿನ ಕೋರ್ಟಿನಿಂದ ೧೯೪೦ ರಲ್ಲಿ ೧೦ ವರ್ಷ ಶಿಕ್ಷೆ ವಿಧಿಸಲ್ಪಟ್ಟ ಸೋವಾರ ಜ್ಞಾನಸಿಂಗ ಸಾಧು ಅವರು ಲಾಹೋರ ಸೆಂಟ್ರಲ್ ಜೇಲಿನಿಂದ ಬಿಡಲ್ಪಟ್ಟಿದ್ದಾರೆ.

ಮುಂಬಯಿ ಎಕ್ಸಪ್ರೆಸದಲ್ಲಿ ಓರ್ವ ಯುರೋಪಿಯನ ತರುಣಿಯ ಕೊಲೆಯಾದ ಸಂಬಂಧದಲ್ಲಿ ಪೋಲೀಸರು ಇಬ್ಬರನ್ನು ಬಂಧಿಸಿದ್ದು ಇನ್ನೊಬ್ಬನ ಶೋಧಕ್ಕಾಗಿ ಅವರು ಬ್ರಾಡಲಾ ಭವನದಲ್ಲಿದ್ದ ಹಿಂ ರಾ ಸೈನ್ಯ ಪರಿಹಾರ ಸಮಿತಿ ಕಚೇರಿಗೆ ಮುತ್ತಿಗೆ ಹಾಕಿದ್ದರು ಆದರೆ ಬೇಕಾದವನು ಸಿಗಲಿಲ್ಲ.

ಪಂಜಾಬ ಪ್ರಾಂತಿಕ ಕಾಂಗ್ರೆಸ ಕಮೀಟಿಗೆ ಡಾ. ಕಿಚಿಲುರವರು ಅಧ್ಯಕ್ಷರಾಗಿ ಆರಿಸಲ್ಪಟ್ಟರುವರು.

## ಸಂಸ್ಥಾನಗಳು

ಶ್ರೀ ನೇಶ್ವಿಯವರು ಆಚೆ ವಾರ ಈಸೂರಿಗೆ ಭೆಟ್ಟಿ ಕೊಟ್ಟು ಸೆರೆಮನೆಯಲ್ಲಿರುವ ರಾಜಕೀಯ ಕೈದಿಗಳ ಕುಟುಂಬದವರನ್ನು ಕಂಡರು. ಸಂಜೆಯಲ್ಲಿ ಸಭೆ ಜರುಗಿ ಶ್ರೀ ನೇಶ್ವಿ, ಶ್ರೀಮತಿ ಲೀಲಾವತಿ ಮಾಗಡಿ ಹಾಗು ಲಿಂಗಪ್ಪ ಎಂಬವರ ಭಾಷಣಗಳಾದವು. ಈಸೂರು ಕೈದಿಗಳನ್ನು ಕೂಡಲೆ ಬಿಡುಗಡೆ ಮಾಡಬೇಕೆಂದು ಕೇಳಿಕೊಳ್ಳಲಾಯಿತು.

ಸುಧಾರಣೆಗಳ ಗುರಿಯು ಜವಾಬದಾರಿ ಸರಕಾರವೇ ಇರತಕ್ಕದ್ದೆಂದು ಪಂ. ಜವಾಹರಲಾಲ ನೆಹರೂರವರು ಕೊಲ್ಹಾಪುರ ಸುಧಾರಣೆ ಸಮಿತಿ ಕಾರ್ಯದರ್ಶಿಗಳ ಪತ್ರಕ್ಕೆ ಉತ್ತರ ಬರೆದಿದ್ದಾರೆ.

# ಪ್ರಥಮ ಮಂತ್ರಾಕ್ಷತೆ

[ ಮೊದಲನೆ ಪುಟದಿಂದ ]

ಗುತ್ತಲ, ರಾಮರಾವ ಹುಕ್ಕೇರಿಕರ ಮತ್ತು ಧಾರವಾಡಕರ ವಾಮನರಾವ ಮುಂತಾದವರನ್ನು ಹಿಂದಕ್ಕೆನೇ ಸೇರಿಸಿದ್ದೆ. ಕಾಲೇಜು ಸ್ಥಾಪಿಸುವ ಉದ್ದೇಶವನ್ನಿಟ್ಟುಕೊಂಡು, ರುಕ್ಮಾಂಗದರಾವ ದೇಶಪಾಂಡೆ, ರಂಗರಾವ ಅಸುಂಡಿ ಮತ್ತು ದೇಸಾಯಿ ಸುರೇಂದ್ರರಾವ ಇವರನ್ನು ಆಜೀವ ಸಭಾಸದರಲ್ಲಿ ಹಾಕಿಸಿದ್ದೆ. ಅದಕ್ಕೆ ಇವನಿಗೂ ಅದರಲ್ಲಿ ಆಜೀವ ಸಭಾಸದನಾಗಲಿಕ್ಕೆ ಹೇಳಿದೆ. ಅಗ ಆತನು ವ್ಹಿಕ್ಟೋರಿಯಾ ಹಾಯಸ್ಕೂಲನ್ನು ಸೇರಿ ಅಧ್ಯಾಪಕನಾದ.

೧೯೧೧ ರಿಂದ ೧೯೨೦ ರ ವರೆಗೆ ನನ್ನ ವಕೀಲಿಯ ಅತ್ಯಂತ ಭರಭರಾಟೆಯ ಕಾಲ. ನನ್ನ ಸಾರ್ವಜನಿಕ ಚಟುವಟಿಕೆಗಳ ಭರಭರಾಟೆಯ ಕಾಲವೂ ಅದೇ. ಇದಕ್ಕೂ ಕೆಲವು ವರ್ಷಗಳ ಮುಂಚೆಯೆ ಕರ್ನಾಟಕ ಸಭೆ ಹೊರಟು ಕರ್ನಾಟಕತ್ವದ ಚಳವಳಿಯು ಪ್ರಾರಂಭವಾಗಿತ್ತು. ಅದು ಒಳ್ಳೇ ಜೋರಿನಲ್ಲಿ ಇತ್ತು. ಕಡಪಾ ರಾಘವೇಂದ್ರ ರಾಯರು ಮುಖ್ಯತಃ ರಾಜಕಾರಣಿಗಳು; ಬೇಂದ್ರೆಯು ಮುಖ್ಯತಃ ಸಾಹಿತಿಯು; ನನಗೆ ಎಲ್ಲವೂ ಬೇಕು; ಎಲ್ಲವೂ ಬೇಡ. ನಾನು ಕರ್ನಾಟಕ ದೇವಿಯ ಪೂಜಾರಿ ಮಾತ್ರ! ಅವರಿಬ್ಬರ ದೃಷ್ಟಿಕೋನಗಳು ಪೂರ್ವ ಪಶ್ಚಿಮಗಳಂತೆ ಭಿನ್ನ. ಒಬ್ಬರು ಕೇವಲ ವ್ಯವಹಾರವಾದಿಗಳು. ಒಬ್ಬರು ಕೇವಲ ಭಾವನಾಪ್ರಧಾನರು. ಈ ಚಳವಳಿಯ ಕಾಲಕ್ಕೆ ಅವರಿಬ್ಬರಲ್ಲಿ ವಾಗ್ಯುದ್ಧಗಳು ನಡೆಯುತ್ತಿದ್ದವು. ಇಬ್ಬರಲ್ಲಿಯೂ ಸಮನ್ವಯ ಮಾಡಿಕೊಡುವ ಕೆಲಸ ನನ್ನದು. ಇಬ್ಬರೂ ಒಂದೇ ದೇವಿಯ ಭಕ್ತರು. ಕರ್ನಾಟಕದ ಉಜ್ವಲಾಭಿಮಾನಿಗಳು. ಅದ್ದರಿಂದ ಅವರಿಬ್ಬರನ್ನು ಕೂಡಿಸುವದು ನನಗೆ ಕಠಿಣವಾಗುತ್ತಿದ್ದಿಲ್ಲ.

ಇತ್ತ ಬೇಂದ್ರೆಯವರಲ್ಲಿ ಕವಿತಾಶಕ್ತಿಯು ಅಭಿವೃದ್ಧಿಯಾಗುತ್ತ ನಡೆದಿತ್ತು. ಆತನು ಯಾವಾಗಲೂ ಅವ್ಯವಸ್ಥಿತನು. ಲಹರು ಬಂದಾಗ ಒಂದೆರಡು ಕವನಗಳನ್ನಾಗಲಿ ಕವನದ ಸಾಲುಗಳನ್ನಾಗಲಿ, ಮಾಡಬೇಕು. ಅವನ್ನು ಶಾಲೆಯ ಹುಡುಗರ ಹಳೆಯ ನೋಟಬುಕ್ಕುಗಳಲ್ಲಿ ಅ ಮೂಲೆಯಲ್ಲಿ ಈ ಮೂಲೆಯಲ್ಲಿ ಬರೆದಿಡಬೇಕು. ಅಗ ಆತನು ಅತಿ ಮುಗ್ಧ. ನಾನು ಭೆಟ್ಟಿಯಾದಾಗ ನನ್ನೊಬ್ಬನ ಮುಂದೆ ಮಾತ್ರ ಓದಿ ತೋರಿಸಬೇಕು. ನನಗೆ ಕನ್ನಡದಲ್ಲಿ ಕವನಗಳು ಹುಟ್ಟುತ್ತವೆಯಲ್ಲ (ಏಕೆಂದರೆ ಅಲ್ಲಿಯ ವರೆಗೆ ಹೊಸಗನ್ನಡದಲ್ಲಿ ಸುಲಭವಾದ ಮತ್ತು ಇಂಪಾದ ಕವನಗಳಾಗುವುದು ಶಕ್ಯವೆ ಇಲ್ಲ ಎಂಬು ನನ್ನ ತಿಳಿವಳಿಕೆ) ಎಂದೂ ಅದನ್ನು ನನ್ನ ಗೆಳೆಯನೊಬ್ಬನು ಮಾಡುತ್ತಾನಲ್ಲ ಎಂದೂ ಸಂತೋಷ! ಇವನಲ್ಲಿ ಕನ್ನಡದ ಉತ್ಕಟ ಅಭಿಮಾನ. ಆದರೆ ಆತನು ಕೊಂಕಣಸ್ಥನು; ಆತನ ಮನೆ ಮಾತು ಮರಾಠಿ. ಆತನು ಕನ್ನಡದಿಂದ ಜಾರಿ ಹೋಗಬಾರದೆಂದು ನನ್ನ ಇಚ್ಛೆ. ಆದ್ದರಿಂದ ಆತನ ಕವಿತೆಗಳು ನನಗೆ ಪೂರ್ಣವಾಗಿ ಅರ್ಥವಾಗದಿದ್ದರೂ ಆತನ ಬೆನ್ನು ಚಪ್ಪರಿಸಿ ಪ್ರೋತ್ಸಾಹಿಸುತ್ತಿದ್ದೆ.

೧೯೧೮ ನೆಯ ಇಸ್ವಿಯಲ್ಲಿ ಸಾಹಿತ್ಯ ಸಮ್ಮೇಲನ ಕೂಡಿದಾಗ ನಮ್ಮ ಮನೆಯಲ್ಲಿಯೆ ಚಿಕ್ಕ ಸಾಹಿತ್ಯ ಸಮ್ಮೇಲನ! ಏಕೆಂದರೆ ಬೆನಗಲ ರಾಮರಾಯರು, ಎನ್ ರಾಜಗೋಪಾಲಕೃಷ್ಣರಾಯರು ಇವರೆ ಮುಂತಾದ ೧೫-೨೦ ಜನ ಪ್ರಮುಖರು ಉಳಿದದ್ದು ನಮ್ಮ ಮನೆಯಲ್ಲಿಯೆ. ಅಗ ನಾನು ಪೋತನೀಸ ಓಣಿಯಲ್ಲಿ ವಕೀಲಿ ಮಾಡುತ್ತಿದ್ದೆ. ಅಲ್ಲಿಗೆ ಶ್ರೀ ಬೇವೂರು ಗುರುರಾಯರೆ ಮುಂತಾದವರು ಬರುತ್ತಿದ್ದರು. ಅ ಕಾಲದಲ್ಲಿ ಪ್ರಥಮತಃ ನಾನು ಬೇಂದ್ರೆಯವರನ್ನು ಜುಲುಮೆಯಿಂದ ಎಳೆದು ತಂದು ಸಾರ್ವಜನಿಕರಲ್ಲಿ ಪ್ರತಿನಿತ್ಯ ಅವರ ಕವಿತೆಗಳನ್ನು ಓದಿಸಿದ್ದು. ಅವರ ಗುಣಾವಿಷ್ಕರಣವಾದುದೆ ಅಗ

ಒಂದೆರಡು ವರ್ಷಗಳಲ್ಲಿ ಅಸಹಕಾರ ಚಳವಳಿಯಲ್ಲಿ ಪುನಃ ನಾನು ವಕೀಲಿ ಬಿಟ್ಟೆ. ಬಿಟ್ಟ ಮೇಲೆ ಒಂದು ವರುಷದಲ್ಲಿ ಇಲ್ಲಿ ಸುರೇಂದ್ರರಾವ ದೇಸಾಯರು ರಾಷ್ಟ್ರೀಯ ಶಾಲೆ ತೆಗೆದರು. ನಾನು ಅಲ್ಲಿಯೂ ಕಲಿಸಲಿಕ್ಕೆ ಹೋಗುತ್ತಿದ್ದೆ. ಕರ್ಮವೀರದ ಸಂಪಾದಕನೂ ಆಗಿದ್ದೆ. ಬೇಂದ್ರೆಯೂ ವ್ಹಿಕ್ಟೋರಿಯಾ ಹಾಯಸ್ಕೂಲು ಬಿಟ್ಟು, ರಾಷ್ಟ್ರೀಯ ಶಾಲೆ ಸೇರಿದ. ಇತ್ತ ನನ್ನ ಸಾಧನಕೇರಿಯ ಬಂಗ್ಲೆಯಲ್ಲಿ ವಿವಿಧ ಅಭಿರುಚಿಯ ಜನರು ವಾರದಲ್ಲಿ ಒಂದು ದಿವಸ ನಮ್ಮಲ್ಲಿ ಕೂಡುತ್ತಿದ್ದರು. ರಾತ್ರಿ ಬೆಳತನಕ ಅಧ್ಯಾತ್ಮ, ರಾಜಕಾರಣ, ಸಾಹಿತ್ಯ ಮುಂತಾದವುಗಳ ಅಭ್ಯಾಸ ಮತ್ತು ಚರ್ಚೆ ನಡೆದು ಮುಂಜಾನೆ ಚದರಿ ತಮ್ಮ ತಮ್ಮ ಉದ್ಯೋಗಗಳಿಗೆ ಹೋಗುತ್ತಿದ್ದರು. ಅ ಕಾಲದಲ್ಲಿ ಹೊರಟಿತು 'ಜಯಕರ್ನಾಟಕ'. ಬೇಂದ್ರೆಯವರು ನನ್ನನ್ನು ಗೆಳೆಯರ ಗುಂಪಿನ "ಹಿರಿಯ" ನನ್ನಾಗಿ ಮಾಡಿದೂ ಆವಾಗ. ಕರ್ನಾಟಕತ್ವದ ನನ್ನ ಕಲ್ಪನೆಗೆ ಅನುಸಾರವಾಗಿ ನಾನು ಅದನ್ನು ನಡೆಸಬೇಕೆಂದು ಮಾಡಿದ್ದರಿಂದ ಅಗ ನಾನು ಅವರಿಗೆ ಒಪ್ಪಿಸಲಿಲ್ಲ. ಏಳು ವರುಷಗಳ ಮೇಲೆ ಅವರಿಗೇನೆ ಒಪ್ಪಿಸಿದೆ.

'ಜಯಕರ್ನಾಟಕ'ದ ಮೊದಲನೆಯ ಸಂಚಿಕೆಯು ಬಿಡಿನುಡಿಯಲ್ಲಿಯೆ ಬೇಂದ್ರೆಯವರು ಪಂಪನ ಉತ್ಸವದ ಸಲುವಾಗಿ ತಮ್ಮ ಹೆಸರು ಹಾಕಿ ಸಂಪಾದಕೀಯ ಲೇಖನವನ್ನು ಬರೆದರು. ಕೆಲವು ದಿನಗಳಾದ ಬಳಿಕ ನಾನು "ಕೃಷ್ಣಾಕುಮಾರಿ" ಎಂಬ ಮೊಟ್ಟಮೊದಲಿನ ಅವರ ಚಿಕ್ಕ ಪುಸ್ತಕವನ್ನು ನನ್ನ ಖರ್ಚಿನಿಂದ ಮುದ್ರಿಸಿ ಅದರ ಒಂದು ಸಾವಿರ ಪ್ರತಿಗಳನ್ನು ಅವರಿಗೆ ಕೊಟ್ಟೆ. ಅದಕ್ಕೆ ಮುನ್ನುಡಿ ಬರೆದವನೂ ನಾನೇ. ಅ ಮುನ್ನುಡಿ ತೀರ ಚಿಕ್ಕ ಮುನ್ನುಡಿ. ಅದು ಹೀಗೆ: "ಈ ಅರೆಅರಳಿದ ಮೊಗ್ಗೆಯ ಸುವಾಸನೆಯನ್ನು ಅರಸಿಕರೂ ಕೂಡ ಮೂಸಿಸಿ ನೋಡದಿರಲೆಂದು ಹಾರೈಸುವೆ."

ಬೇಂದ್ರೆಯವರ ದತ್ತಕ ಪ್ರಕರಣವನ್ನು ಹೇಳುವೆ. ಬೇಂದ್ರೆಯವರ ತಾಯಿಗೆ ನಾನು ಸಲಹೆಗಾರನಾಗಿದ್ದೆನೆಂದು ಹೇಳಿದೆನಷ್ಟೆ. ಅವರ ಚಿಕ್ಕಪ್ಪರಾದ ಖಂಡೇರಾಯರಿಗೆ ಮಕ್ಕಳಿದ್ದಿಲ್ಲ. ಅವರಿಗೆ ದತ್ತನ ಮೇಲೆ ಪ್ರೇಮ ಬಹಳ. ಅದ್ದರಿಂದ ಅವರಿಗೆ ಆತನನ್ನು ದತ್ತಕ ಮಾಡಿಸಿಬಿಡಬೇಕೆಂದು ನಾನೂ ಅಂಬಕ್ಕನೂ ವಿಚಾರ ಮಾಡಿದೆವು. ಅದರೆ ಅದನ್ನು ಕೇಳುವುದು ಹೇಗೆ? ಅದಕ್ಕಾಗಿ ಅವರು ಪೆನ್‌ಶನ್ ತಕ್ಕೊಂಡ ಬಳಿಕ ಅವರಿಗೆ ಇಲ್ಲಿ ಇರಲಿಕ್ಕೆ ಹೇಳಬೇಕೆಂದೂ ಅಗ ಸಮಯ ನೋಡಿಕೊಂಡು ನಾವೆ ಅ ಮಾತು ತೆಗೆಯಬೇಕೆಂದೂ ಗೊತ್ತು ಮಾಡಿದೆವು. ಅವರಿಗೂ ಧಾರವಾಡದಲ್ಲಿಯೆ ಇರುವ ಇಚ್ಛೆ. ಅದರೆ ಆಕಸ್ಮಿಕವಾಗಿ ಅಂಬಕ್ಕನು ತೀರಿಹೋದುದರಿಂದ ಆ ಯೋಗವು ತಪ್ಪಿಹೋಯಿತು. ಇರಲಿ. ಹೀಗೆ ದತ್ತನ ದತ್ತಕ ಯೋಗವು ತಪ್ಪಿಹೋದರೂ ಆತನನ್ನು ನಾನು 'ಜಯಕರ್ನಾಟಕ'ಕ್ಕೆ ದತ್ತಕ ತೆಗೆದುಕೊಂಡು ಅದಕ್ಕೆ ವಾರಸದಾರನನ್ನಾಗಿ ಮಾಡಿದೆ. ನನ್ನ ಜೀವನದ ವ್ಯಾಪಕತೆಯ ಮತ್ತು ಗಂಭೀರತೆಯ ಮರ್ಮವನ್ನು ಆತನೊಬ್ಬನೆ-ಅಗ ಚೆನ್ನಾಗಿ ಬಲ್ಲವನಾದ್ದರಿಂದಲೂ ಅಷ್ಟರಲ್ಲಿ 'ಜಯಕರ್ನಾಟಕ'ದ ಮುಖ್ಯ ಉದ್ದೇಶವನ್ನು ಅದರ ಮುಖ್ಯ ಧೋರಣೆಯನ್ನು ಅರಿತವನಾದ್ದರಿಂದಲೂ ನಾನು ಏಳು ವರುಷ ಜಯಕರ್ನಾಟಕವನ್ನು ನಡೆಸಿ ಆತನಿಗೆ ಆತನ ಮುಖಾಂತರವಾಗಿ ಸಾರ್ವಜನಿಕಕ್ಕೆ ಒಪ್ಪಿಸಿಬಿಟ್ಟೆ. ಸಾಧನಕೇರಿಯಲ್ಲಿ ನಮ್ಮ ಕಕ್ಕಂದಿರ ಬಂಗ್ಲೆಯನ್ನು ಅವರಿಗೆ ಮಾರಲಿಕ್ಕೆ ಕೊಡಿಸಿದೆ. ಆಗಿನಿಂದ ಅವರು ಸಾಧನಕೇರಿಯ ವಾಸಿಗಳಾಗಿದ್ದಾರೆ. ಮುಂದಿನ ಕಥೆ ಮಂದಿಗೆ ಗೊತ್ತೇ ಇದೆ. ನಾನು ಹೇಳುವ ಕಾರಣವಿಲ್ಲ.

೧೯೩೦ ರಲ್ಲಿ ನಾನು ಮೈಸೂರ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷನಾದಾಗ ಅಲ್ಲಿಯವರು ಕವಿಗೋಷ್ಠಿಯ ಕಲ್ಪನೆ ತೆಗೆದು ಅದಕ್ಕೆ ಬೇಂದ್ರೆಯವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಅಗ ಆತ ತೀರ ಮುಗ್ಧ. ಎಂದೂ ಸಭೆಯಲ್ಲಿ ಬಾಯಿ ತೆಗೆದವನಲ್ಲ. ಆತನನ್ನು ಗಣಪ್ಪನಂತೆ ಕೂಡ್ರಿಸಿ ನಾನೆ ಅಧ್ಯಕ್ಷ ವಿಧಿ ಮುಗಿಸಿದೆ. ಆತ ತುಟಿ [illegible]ಲ್ಲ. ಅದರೆ ಈಗ ನೋಡಬೇಕು– ಉಜ್ವಲ ವಾಗ್ಮಿ.

ಹೀಗೆ ನನಗೆ ಅವರ ಸಂಬಂಧವು ವಿಶೇಷವಾದುದು ಲೋಕವಿಲಕ್ಷಣವಾದುದರಿಂದಲೇ ನಾನು ಅವರ ೫೦ ನೆಯ ಹುಟ್ಟು ದಿನದ ಈ ಸಮಾರಂಭದಲ್ಲಿ ನೂಕಲದಲ್ಲಿ ಒಳನುಗ್ಗಿ ಹೋಗಿ ನನ್ನ ಹಕ್ಕನು [illegible] ಎಂದು [illegible] ಮಾಡಿಸಿ ನನಗೆ ಸಲ್ಲತಕ್ಕ ಐದು ಬಿಲ್ಲಿ ಹಕ್ಕಿನ ದಕ್ಷಿಣೆಯನ್ನು ಟೊಂಕಕ್ಕೆ ಸಿಕ್ಕಿಸಿಕೊಂಡು ಪ್ರಥಮ ಮಂತ್ರಾಕ್ಷತೆಯನ್ನು ಆತನ ತಲೆಯ ಮೇಲೆ ಹಾಕಿ ಹೊರಬೀಳುತ್ತೇನೆ.

## ಸಿಮುಲಾ ಪರಿಷತ್ತು ಮುರಿದುದೇಕೆ ?

( ೬ನೇ ಪುಟದಿಂದ )

ಹಾಜರಿದ್ದು ಮತ ಕೊಡುವ ಸದಸ್ಯರ ಬಹುಮತ ದೊರಕಬೇಕು. ವಿವಾದಾತ್ಮಕವಾದ ಯಾವುದೇ ಪ್ರಶ್ನೆಯಲ್ಲಿ ಯೂನಿಯನ್‌ನವರು ೩|೪ ಬಹುಮತವಿಲ್ಲದೆ ಶಾಸನಾತ್ಮಕ ಅಥವಾ ಆಡಳಿತ ಸಂಬಂಧ ನಿರ್ಣಯವನ್ನು ಕೈಕೊಳ್ಳತಕ್ಕದ್ದಲ್ಲ.

ಗುಂಪಿನ ಮತ್ತು ಪ್ರಾಂತಗಳ ಘಟನೆಗಳಲ್ಲಿ ಧಾರ್ಮಿಕ ಸಾಂಸ್ಕೃತಿಕ ಭದ್ರತೆಯ ಆಶ್ವಾಸನವಿರಬೇಕು.

ಹತ್ತು ವರ್ಷಗಳಾದ ನಂತರ ಶಾಸನ ಸಭೆಯ ಬಹುಮತದಿಂದ ಘಟನೆಯ ಪುನರ್ವಿಮರ್ಶೆಯನ್ನು ಬೇಡಲು ಹಾಗು ಬೇಕಾದಾಗ ಯೂನಿಯನ್ನಿನಿಂದ ಸಿಡಿದು ಹೋಗಲು ಹಕ್ಕು ಇರಬೇಕು.

### ಕಾಂಗ್ರೆಸ್ಸಿನ ಬೇಡಿಕೆಗಳು

೧೩ ನೆ ತಾರೀಖಿಗೆ ಕಾಂಗ್ರೆಸ್ಸೂ ತನ್ನ ಬೇಡಿಕೆಯನ್ನು ರಾಯಭಾರದ ಮುಂದಿರಿಸಿತು. ಅದರ ತಿರುಳಿಂತಿದೆ:

ಪ್ರತಿ ಪ್ರಾಂತಿಕ ಶಾಸನಸಭೆಯ ಸದಸ್ಯರ ೧|೫ ರಷ್ಟು ಸದಸ್ಯರನ್ನು ಆಯಾ ಶಾಸನಸಭೆಗಳು ಸಿಂಗಲ್ ಟ್ರಾನ್ಸಫರೇಬ್ಲ ಮತ ಪದ್ಧತಿಯಿಂದ ಆರಿಸಿ ಘಟನಾ ಸಮಿತಿ ನಿರ್ಮಿಸಬೇಕು. ಆರಿಸಲ್ಪಡುವವರಲ್ಲಿ ಶಾಸನಸಭಾ ಸದಸ್ಯರಲ್ಲದವರೂ ಇರಬಹುದು. ಸಂಸ್ಥಾನದ ಪ್ರತಿನಿಧಿಗಳ ಸಂಖ್ಯೆ ಜನಸಂಖ್ಯಾನುಗುಣವಾಗಿದ್ದು ಅವರ ಆಯ್ಕೆಯ ವಿಧಿಯನ್ನು ಮುಂದೆ ನಿರ್ಣಯಿಸಬಹುದು.

ಈ ಘಟನಾ ಸಮಿತಿ ಅ. ಭಾ. ಯೂನಿಯನ್ ಘಟನೆಯನ್ನು ರಚಿಸಬೇಕು. ಯೂನಿಯನ್ನಿಗೆ ಶಾಸನಸಭೆ ಮತ್ತು ಸಂಯುಕ್ತ ಸರಕಾರವಿದ್ದು ವಿದೇಶ, ಸಂರಕ್ಷಣ, ಮಾರ್ಗ ಮತ್ತು ಮೂಲಭೂತ ಹಕ್ಕು, ಚಲನ, ಸುಂಕ, ಯೋಜನೆ ಹಾಗು ತತ್ಸಂಬಂಧಿ ಅಧಿಕಾರಗಳಿರಬೇಕು. ಈ ವಿಷಯಗಳಿಗಾಗಿ ಸ್ವಂತ ಅಧಿಕಾರದಲ್ಲಿ ತೆರಿಗೆಯೆತ್ತಲು ಅದಕ್ಕೆ ಹಕ್ಕಿರಬೇಕು. ಘಟನೆ ಕುಸಿದು ಬೀಳುವ ಮತ್ತು ಇತರ ಸಾರ್ವಜನಿಕ ಗಂಡಾಂತರಗಳ ಕಾಲದಲ್ಲಿ ಅದನ್ನು ಸರಿಪಡಿಸುವ ಹಕ್ಕು ಇರಬೇಕು. ಉಳಿದೆಲ್ಲ ಅಧಿಕಾರ ಪ್ರಾಂತಗಳಿಗೆ.

ಘಟನಾ ಸಮಿತಿ ಯೂನಿಯನ್ ಘಟನೆಯನ್ನು ಸಿದ್ಧಗೊಳಿಸಿದ ನಂತರ ಪ್ರಾಂತಿಕ ಘಟನೆಗಳನ್ನೂ ಗುಂಪುಗಳ ಘಟನೆಗಳನ್ನೂ ನಿರ್ಣಯಿಸಲು ಗುಂಪುಗಳನ್ನು [illegible] ಮಾಡಿಕೊಳ್ಳಬಹುದು.

ಯೂನಿಯನ್ ಘಟನೆಯಲ್ಲಿ ಜಾತೀಯ ಮುದ್ದೆಗೆ ಸಂಬಂಧಿಸಿದ ಮಹತ್ವದ ಪ್ರಶ್ನೆಗಳನ್ನು ಆಯಾ ಜಾತೀಯ ಸದಸ್ಯರಲ್ಲಿ ಹಾಜರಿದ್ದು ಮತ ಕೊಡುವವರ ಬಹುಮತದಿಂದ ನಿರ್ಣಯಿಸಬೇಕು. ಇದರಲ್ಲಿ ಬಿಕ್ಕಟ್ಟುಂಟಾದರೆ ಪಂಚಮಂಡಲಕ್ಕೊಪ್ಪಿಸಬೇಕು. ಘಟನೆ ರಚಿಸುವ ಕ್ರಮದಲ್ಲಿ ತಂಟೆಯೆದ್ದರೆ ವಿಶಿಷ್ಟ ಮುದ್ದೆಗಳನ್ನು ಮಧ್ಯಸ್ಥಿಕೆಗೊಪ್ಪಿಸಬಹುದು. ೧೦ ವರ್ಷಗಳ ನಂತರ ಘಟನೆಯ ಪುನರ್ವಿಮರ್ಶೆಗೆ ಅವಕಾಶವಿರಬೇಕು.

ಮುಸ್ಲಿಮ ಲೀಗಿನ ಕನಿಷ್ಠ ಬೇಡಿಕೆಗಳಿಗೂ ಕಾಂಗ್ರೆಸ್ ಅಧ್ಯಕ್ಷರು ಉತ್ತರ ಕೊಟ್ಟರು. ಅದರಲ್ಲಿ ಅವರು ಗುಂಪುಗಳ ರಚನೆಗೆ ಸಮ್ಮತಿಯಿತ್ತರೂ ಅದು ಐಚ್ಛಿಕವಾಗಿರಬೇಕೆಂದು ಹೇಳಿ, ಆಸಾಮ, ಗಡಿನಾಡುಗಳು ಗುಂಪಿನ ನಿರ್ಮಾಣದ ವಿರುದ್ಧ ಮತವಿತ್ತಿದ್ದು (ಚುನಾವಣೆಗಳಲ್ಲಿ) ಅವುಗಳಿಗೆ ಗುಂಪಿನ ಅವಶ್ಯಕತೆಯಿಲ್ಲವೆಂದು ತೋರಿಸಿರುವರು. ಶಿಷ್ಟಾಧಿಕಾರಗಳು ಪ್ರಾಂತಗಳಲ್ಲಿರಲು ಅವರು ಆಕ್ಷೇಪವೆತ್ತಲಿಲ್ಲ.

ಸಿಂಗಲ್ ಟ್ರಾನ್ಸಫರೇಬಲ್ ಮತದಾನ ಪದ್ಧತಿಯೇ ಘಟನಾ ಸಮಿತಿಯ ಆಯ್ಕೆ ಯೋಗ್ಯವೆಂದು ಕಾಂಗ್ರೆಸ್ ಸೂಚಿಸಿದೆ. ಜಾತೀಯ ಜನಸಂಖ್ಯಾ ಪ್ರಮಾಣದಲ್ಲಿ ಪ್ರತಿನಿಧಿಗಳ ಆಯ್ಕೆಗೆ ಕಾಂಗ್ರೆಸ್ಸಿನ ವಿರೋಧವಿಲ್ಲ. ಆದರೆ ಕೆಲ ಪ್ರಾಂತಗಳ ಶಾಸನ ಸಭೆಗಳಲ್ಲಿ ಕೆಲ ಜಾತಿಗಳಿಗೆ ಹೆಚ್ಚಿನ ಪ್ರಾತಿನಿಧ್ಯವಿದ್ದು ಲೀಗು ಹೇಳುವಂತೆ ಜಾತೀಯ ಸಂಖ್ಯಾ ಪ್ರಮಾಣದಿಂದ ಪ್ರತಿನಿಧಿಗಳನ್ನು ಆರಿಸಿದರೆ ಅಲ್ಲಿ ತಂಟೆಯುಂಟಾದೀತು.

ಗುಂಪುಗಳಿಂದ ಹೊರಗುಳಿಯಲು ಪ್ರಾಂತಗಳ ಒಪ್ಪಿಗೆ ಅವಶ್ಯವಿಲ್ಲ ಏಕೆಂದರೆ ಗುಂಪಿಗೆ ಸೇರಲು ಆ ಒಪ್ಪಿಗೆ ಮೊದಲೇ ತೆಗೆದುಕೊಳ್ಳಲ್ಪಡಬೇಕಾಗುವದು.

ಯೂನಿಯನ್ನಿಗೆ ಶಾಸನ ಸಭೆಯೂ ಬೇಕು ಕರ ಎತ್ತುವ ಹಕ್ಕೂ ಬೇಕು. ಜಾತೀಯ ಸಮಪ್ರಾತಿನಿಧ್ಯಕ್ಕೆ ಕಾಂಗ್ರೆಸ್ಸು ವಿರುದ್ಧವಾಗಿದೆ.

ವಿವಾದಾತ್ಮಕ ವಿಷಯಗಳು ೩|೪ ರ ಬಹುಮತದಿಂದಲೇ ನಿರ್ಣಯವಾಗಬೇಕೆಂಬ ನಿರ್ಬಂಧವಿದ್ದಲ್ಲಿ ಯಾವದೇ ಸರಕಾರ ಸರಾಗವಾಗಿ ಕೆಲಸ ಮಾಡಲಾರದು. ಅದ್ದರಿಂದ ಅದಕ್ಕೆ ಕಾಂಗ್ರೆಸ್ಸು ಒಪ್ಪಲಾರದು.

ಮೂಲಭೂತ ಹಕ್ಕು, ಧರ್ಮ ಸಂಸ್ಕೃತಿಗಳಿಗೆ ಘಟನೆಯಲ್ಲಿ ರಕ್ಷಣೆಯಿರಬೇಕು ನಿಜ. ಆದರೆ ಅದು ಅಖಿಲ ಭಾರತದಲ್ಲಿ ಒಂದೇ ಪ್ರಕಾರದ್ದಿರಬೇಕಾಗುವದರಿಂದ ಕೇಂದ್ರದ ಘಟನೆಯಲ್ಲಿಯೆ ಅದರ ವ್ಯವಸ್ಥೆ ಮಾಡಬೇಕು.

೧೦ ವರ್ಷದ ನಂತರ ಘಟನೆಯ ಪುನರ್ವಿಮರ್ಶೆಗೆ ಅವಕಾಶವಿದ್ದರೂ ಅದಕ್ಕೆ ಉತ್ತೇಜನ ಕೊಡುವದು ಸರಿಯಿಲ್ಲ.

ಈ ಎರಡೂ ಪಕ್ಷಗಳ ಹೇಳಿಕೆಗಳನ್ನು ಕೇಳಿಕೊಂಡು ಮಂತ್ರಿತ್ರಯರು ಸೂಚನೆಗಳನು ಸಿದ್ಧಗೊಳಿಸಿದರು.

( ಅದರ ಸಾರ ಕಳೆದ ವಾರ ಪ್ರಕಟವಾಗಿದೆ )

---

# ಸರಕಾರದವರು ಆಹಾರದ ಸಲುವಾಗಿ ಕೈಕೊಂಡಿರುವ ಉಪಾಯಗಳು

೧. ಭಾರತದಲ್ಲಿ ದೊರೆಯುವ ಆಹಾರ ಧಾನ್ಯಗಳನ್ನೆಲ್ಲ ಭಾರತದ ಸರ್ವಕ್ಷೇತ್ರಗಳಲ್ಲಿ ಹಂಚಲಾಗುವುದು. (ಆಹಾರವನ್ನು) ಹೆಚ್ಚು ಬೆಳೆಯುವ ಮತ್ತು ಬರಗಾಲದ ಕ್ಷೇತ್ರಗಳಿಗೆ (ಆಹಾರದ) ಸರಿ ಪಾಲು ದೊರೆಯುವಂತೆ ಮಾಡಲಾಗುವುದು.

೨. ಸರಕಾರದವರು ಈ ದೇಶದ ಒಳಭಾಗದಲ್ಲಿಯ ಹುಟ್ಟುವಳಿಗಳನ್ನು ತಮ್ಮ ವಶಕ್ಕೆ ತಂದುಕೊಳ್ಳುವ ಯೋಜನೆಯನ್ನು ರೂಢಿಯಲ್ಲಿ ತಂದಿದ್ದಾರೆ ಮತ್ತು ಅದನ್ನು ಬೆಳೆಸಿದ್ದಾರೆ. ಉತ್ಪಾದಕರಿಗೆ ನ್ಯಾಯವಾಗಿ ದೊರೆಯಬೇಕಾದ ಶೀಡಾ ಪ್ರಮಾಣವನ್ನು ಬಿಟ್ಟು ಉಳಿದ ಹೆಚ್ಚಿನ ಭಾಗವನ್ನು ಸರಕಾರದವರು ಪಡೆಯಬಹುದಾಗಿದೆ.

೩. ಬೆಲೆಗಳ ನಿಯಂತ್ರಣದ ಯೋಜನೆಯಿಂದ ಉತ್ಪಾದಕರಿಗೆ ಹಾಗೂ ಕೊಂಡುಕೊಳ್ಳುವವರಿಗೆ ಹಿತವಾಗುವುದು.

೪. ಶೀಡಾ ಪದ್ಧತಿಯನ್ನು (ಎಲ್ಲ ಕಡೆಗೆ) ವಿಸ್ತರಿಸಿ ಅಗತ್ಯ [illegible] ಕಂಡುಬಂದರೆ ಶೀಡಾ ಪ್ರಮಾಣದಲ್ಲಿ ಕಡಿತವನ್ನು [illegible] ಆಹಾರದ ಕೊರತೆಯು ಸಮನಾಗಿ ಎಲ್ಲ ಕಡೆಗೆ [illegible] ಹಂಚಿಕೊಳ್ಳುವಂತೆ ಮಾಡಲಾಗುವುದು.

೫. ಈಗಾಗಲೇ ಶಹರ ಮತ್ತು ಹಳ್ಳಿಗಳು ಕೂಡಿ ಸರಾಸರಿ ೧೩ ಕೋಟಿ ಜನರು ಸೀದಾಪದ್ಧತಿಯನ್ನು ಅನುಸರಿಸುತ್ತಿದ್ದಾರೆ.

೬. ಧಾನ್ಯಗಳ ಎಲ್ಲ ನಿರ್ಯಾತವನ್ನು [illegible]

೭. ಹೊರಗಿನಿಂದ (ಆಹಾರವು) ಆಯಾತವಾಗುವಂತೆ ಎಲ್ಲ ಬಗೆಯ ಪ್ರಯತ್ನವನ್ನು ಕೈಕೊಳ್ಳಲಾಗುತ್ತಿದೆ.

೮. ಹೆಚ್ಚಿಗೆ ಆಹಾರ ಬೆಳೆಯಿರಿ ಎಂಬ ಚಟುವಟಿಕೆಯನ್ನು ವಿಸ್ತರಿಸಲಾಗುತ್ತಿದೆ. ಹೊಸ ಕ್ಷೇತ್ರದಲ್ಲಿ ಸಾಗುವಳಿಯನ್ನು ಪ್ರಾರಂಭಿಸಲಾಗಿದೆ. ಸರಕಾರೀ ಕ್ಷೇತ್ರಗಳಲ್ಲಿರುವ ಹುಲ್ಲುಗಾವಲು ಮತ್ತು ತೋಟಗಳಲ್ಲಿ ಆಹಾರವನ್ನು ಬೆಳೆಯಲಾಗುವುದು.

೯. (ಆಹಾರವನ್ನು) ಶೇಖರಿಸುವುದು, [illegible] ಮತ್ತು ಲಂಚಗುಳಿತನ - ಇವುಗಳಿಗೆ ಅಡ್ಡಿಯನ್ನು [illegible] ಮಾಡಲು ಆಹಾರದ ಮೇಲಿನ ಆಡಳಿತೆಯನ್ನು ಸುಧಾರಿಸಲಾಗುತ್ತಿದೆ.

ಆಹಾರದ ಸಮಸ್ಯೆಯನ್ನು ಬಿಡಿಸಲು ಕೈಕೊಂಡಿರುವ ಉಪಾಯಗಳಲ್ಲಿ ಮೇಲಿನವು ಕೆಲವು ಆಗಿವೆ. ನಿಮ್ಮ [illegible] ಮತ್ತು ಸಹಕಾರವು ನಮಗೆ ಅವಶ್ಯವಾಗಿ ಬೇಕಾಗಿದೆ. ಅದನ್ನು ತಡೆದು ಹಿಡಿಯಬೇಡಿರಿ.

## ಆಹಾರದ ಕೊರತೆಯನ್ನು ಹೋಗಲಾಡಿಸಿರಿ

ಹುಮ್ಮಸ್ಸಿನಿಂದ ದುಡಿಯಿರಿ      ಎಲ್ಲರೂ ಪಾಲುಗಾರರಾಗಿರಿ

ಹಿಂದುಸ್ಥಾನ ಸರಕಾರದ ಆಹಾರ ಶಾಖೆ, ಹೊಸದಿಲ್ಲಿ, ಇವರ ಪ್ರಕಟನೆ

# ಕಳ್ಳಪೇಟೆಯ ಉಚ್ಚಾಟನೆ

## ಹನ್ನೊಂದು ವ್ಯಾಪಾರಿಗಳ ಬಂಧನ

### ಕತ್ತೆಗಳ ಮೇಲೆ ಸಕ್ಕರೆ ರವಾನಿಸುವ ಪ್ರಯತ್ನ

ಮುಂಬಯಿ ಸರಕಾರದವರು ಈ ತಿಂಗಳ ಪ್ರಾರಂಭದಲ್ಲಿ ನೇಮಿಸಿದ ಕಳ್ಳಪೇಟೆ ಮತ್ತು ಲಂಚಗುಳಿತನ ಉಚ್ಚಾಟನೆ ಸಂಸ್ಥೆಯವರು ತಮ್ಮ ಕೆಲಸವನ್ನು ಈಗಾಗಲೇ ಪ್ರಾರಂಭಿಸಿದ್ದು ಇಲ್ಲಿಯ ವರೆಗೆ ಹನ್ನೊಂದು ಜನ ಜವಳಿ ಮತ್ತು ಇತರ ವ್ಯಾಪಾರಸ್ಥರನ್ನು ಬಂಧಿಸಿರುತ್ತಾರೆ. ಅವರನ್ನೀಗ ಜಾಮೀನ ಮೇಲೆ ಬಿಡಲಾಗಿದೆ.

ಒಂದು ನೆಲಮನೆಯಲ್ಲಿ ಎಪ್ಪತ್ತು ಚೀಲ ಅಕ್ಕಿ ಮತ್ತು ಎರಡು ಚೀಲ ಸಕ್ಕರೆ ಸಿಕ್ಕಿರುತ್ತವೆ. ಈ ಸಂಗ್ರಹ ತಿಳಿಸಿದ ನಾಲ್ವರು ವ್ಯಾಪಾರಸ್ಥರು ಮತ್ತು ಓರ್ವ ಮೋಟರ ಡ್ರಾಯವ್ಹರನನ್ನೂ ಬಂಧಿಸಲಾಗಿದೆ.

೧೧೦೦ ಮುಗ್ಗಲಾಸಿಗೆ, ೩೫ ಜೋಡು ದೋತರ ೧೦೭ ಸೀರೆ ಮತ್ತು ೪೩೦ ಗಜ ಅರಿವೆ ಇಷ್ಟು ಮಾಲು ಇಬ್ಬರು ವ್ಯಾಪಾರಿಗಳ ಗುದಾಮಿನಲ್ಲಿ ಸಿಕ್ಕಿರುತ್ತವೆ.

ಇಬ್ಬರು ಅಗಸರು ತಮ್ಮ ಕತ್ತೆಗಳ ಮೇಲೆ ನಾಲ್ಕು ಮಣ ಸಕ್ಕರೆ ಹೇರಿಕೊಂಡು ಹೋಗುವದನ್ನು ಪೋಲೀಸರು ಬೆನ್ನಟ್ಟಿ ಹಿಡಿದಿರುವರು.

ಹಲವರು ರಸ್ತೆಯಲ್ಲಿ ತಿರುಗಾಡಿ ಸೈನಿಕರಿಗೆ ಗಡಿಯಾರಗಳನ್ನು ಮಾರಿ ವಿಶೇಷ ಲಾಭ ಪಡೆಯುತ್ತಿದ್ದರು. ಇಂಥವರಲ್ಲಿ ಒಬ್ಬನನ್ನು ಬಂಧಿಸಿರುವದರಿಂದ ಆ ವರ್ಗದವರಿಗೂ ಹೆದರಿಕೆ ಕೂತಂತಾಗಿದೆ. ಬಂಧಿಸಿದವನ ಮನೆ ಶೋಧಿಸಲಾಗಿ ಹನ್ನೆರಡು ಕೈಗಡಿಯಾರಗಳು ಸಿಕ್ಕವು.




## ಮುಂಬಯಿ ಶೇರ ಪೇಟೆ

ತಾ. ೨೨

ತಾ. ೨೦ ರಿಂದಾರಂಭಿಸಿ ಮುಂಬಯಿ ಶೇರ ಪೇಟೆ ಮುಚ್ಚಿಯೇ ಇದೆ. ಸ್ಟಾಕ್ ಎಕ್ಸಚೇಂಜದ ಕಾರಕೂನರು ಸಂಪು ಹೂಡಿರುವದು ಮತ್ತು ಇಂದು ಶೇಠ ಗೋವಿಂದ ಸಕ್ಸೇರಿಯಾರು ದೈವಾಧೀನರಾದುದು ಪೇಟೆ ಮುಚ್ಚಿರಲು ಕಾರಣವಾಗಿದ್ದವು. ಕಳೆದ ವಾರದ ವರದಿಯ ನಂತರ ಟಾಟಾ ಡೆಫರ್ಡ ಪಾಲುಗಳು ಪ್ರತಿಕ್ರಿಯೆ ತೋರಿ ೩೦೧೧—೪—೦ ಕ್ಕೆ (ಶನಿವಾರ) ಇಳಿದವು. ಡಾಯಿಂಗ್ ಪಾಲುಗಳು ೨೫೩೫—೦—೦ ರ ವರೆಗೆ ಇದ್ದುವುಗಳು ೨೫೧೧—೪—೦ ಗೆ ಇಳಿದವು. ಜವಳಿ ಪಾಲುಗಳೂ ಕುಂಠಿತವಾದವು. ಕೋಹಿನೂರು ೯೩೨—೦—೦ ರಿಂದ ೯೨೪—೦—೦ ಕ್ಕೆ, ಸ್ವದೇಶಿ ೮೧೪—೦—೦ ರಿಂದ ೮೧೨—೦—೦ ಕ್ಕೆ, ಸೆಂಟ್ರಲ್ ಇಂಡಿಯಾ ೪೯೨—೮—೦ ರಿಂದ ೪೮೩—೦—೦ ಕ್ಕೆ ಇಳಿದವು. ಬೇಲಾಪುರ ೨೯೬—೦—೦ ರಿಂದ ೨೯೯ ಕ್ಕೇರಿತು. ಅಸೋಸಿಯೇಟೆಡ್ ಸಿಮೆಂಟ್ಸ ೨೫೩—೮—೦ ರಿಂದ ೨೫೩-೪-೦ ಕ್ಕಿಳಿಯಿತು. ಸದ್ಯಕ್ಕೆ ಅನಧಿಕೃತ ದರಗಳು ಬಿಗಿಯಾಗಿಯೆ ಇವೆಯೆಂದು ತಿಳಿಯುತ್ತದೆ. ಬ್ಯಾಂಕ ಪಾಲುಗಳಲ್ಲಿ ಸೆಂಟ್ರಲ್ ಬ್ಯಾಂಕು ೧೩೭-೮-೦ ರಿಂದ ೧೩೮-೪-೦ ಕ್ಕೆ ಇಂಪೀರಿಯಲ್ ಎಫ್. ಸಿ. ೨೬೮೦-೦-೦ ರಲ್ಲಿ ಯಥಾಸ್ಥಿತಿ ರಿಝರ್ವ ಬ್ಯಾಂಕ ೧೭೨-೦-೦ ರಿಂದ ೧೭೦-೮-೦ ಕ್ಕೆ ಇವೆಲ್ಲ ಶನಿವಾರ ತಾ ೧೭ ರ ದರಗಳು.

ಸರಕಾರಿ ಭದ್ರತೆಗಳಲ್ಲಿ ಜಿ. ಪಿ. ನೋಟು ೧೦೨—೧೧—೦ ೩॥ ದರ (೧೯೪೬—೫೦) ೧೦೩—೬—೦ ಯಲ್ಲಿವೆ.

### ಚಿನ್ನ—ಬೆಳ್ಳಿ

ಚಿನ್ನ ಬೆಳ್ಳಿ ಪೇಟೆ ತಾ ೨೨ ಕ್ಕೆ ಮುಚ್ಚಿತ್ತು. ಚಿನಿವಾರ ಕಟ್ಟೆಯ ವಾಯದಾ ತಂಟೆ ಇನ್ನೂ ಬಗೆಹರಿದಿಲ್ಲ. ಅದು ನ್ಯಾಯಸ್ಥಾನಕ್ಕೆ ಹೋದರೂ ಹೋಗಬಹುದು. ಚಿನ್ನ ಬೆಳ್ಳಿ ದರಗಳು ಇಳಿಯುವ ಲಕ್ಷಣವಿಲ್ಲ. ಅನಧಿಕೃತ ವಾಯದಾ ದರಗಳು ಬುಲಿಯನ ಎಕ್ಸಚೇಂಜದ ಪರಮಾವಧಿ ನಿರ್ದೇಶಕ್ಕಿಂತ ಏರಿಕೆಯಲ್ಲೆ ಇವೆ. ತಯಾರಿ ಬೆಳ್ಳಿ ೧೮೫—೦—೦ ಚಿನ್ನ ರೂ. ೧೦೭-೦-೦ ರಲ್ಲಿ ತಾ ೨೧ ಕ್ಕೆ ವ್ಯಾಪಾರ ಕೊನೆಗೊಂಡಿತು.

### ಅರಳೆ

ಅಹಮದಾಬಾದ ಮೊದಲಾದ ಗಿರಣಿಗಳಿಗೆ ಇಜಿಪ್ತದ ಅರಳೆ ತರಿಸಲು ಸರಕಾರ ಅನುಮತಿ ಕೊಟ್ಟಿದೆಯೆಂಬದೇ ಮೊದಲಾದ ಸುದ್ದಿಗಳೂ ಮುಂದಿ ವ್ಯಾಪಾರಸ್ಥರ ಕೈವಾಡವೂ ಸೇರಿ ಕಳೆದ ವಾರ ಅರಳೆಯ ದರದ ಅಧಃಪಾತಕ್ಕೆ ಕಾರಣವಾದವು. ಮೇ ವಾಯಿದೆ ೪೩೫—೦-೦ ರ ವರೆಗೂ ಇಳಿದು ಹೋಯಿತು. ದರಗಳು ತುಸು ಸುಧಾರಿಸಿವೆ. ಜುಲೈ ವಾಯಿದೆ ೪೪೫—೦—೦ ಸಪ್ಟಂಬರ ೪೫೩—೦—೦ ಅಕ್ಟೋಬರ ೪೬೨-೦-೦

### ಎಣ್ಣೆಕಾಳು

| | |
|---|---|
| ಶೇಂಗಾ | ರೂ. ೧೨೪—೦—೦ |
| ಅಗಸಿ | ,, ೨೬-೨—೦ |
| ಅಗಸಿಎಣ್ಣೆ | ೧೫-೧೧-೦ |

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ ರೂ. | | ೧೪—೧೬ |
| ಅರಿಸಿಣ ಹೇರು | ,, | ೮೦—೯೧ |
| ಮೆಣಸಿನಕಾಯಿ ಹೇರು | ,, | ೧೭೦—೨೦೦ |
| ಶೇಂಗಾ (ಖಂಡಿ) | ,, | ೯೪-೯೬ |
| ದೇಶಿ ತಂಬಾಕು ಹೇರು | | ೧೨೫-೨೫೦ |
| ಪಂಢರಪುರಿ | " | ೨೦೦—೩೦೦ |
| ತಂಬಾಕು ಅಕೋಳ (ಹೇರು) | | ೨೫೦—೪೦೦ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೩೦೫ |
| ,, | ನಂ. ೨ | ೨೯೫ |
| ,, | ನಂ. ೩ | ೨೯೦ |
| ಅಪಲಂಡ ಹತ್ತಿ | | ೨೭೦-೨೯೦ |
| ಜಿನ | | ೨೧೫-೨೩೦ |
| ಸಾಜಿನ | | ೨೧೦-೨೧೫ |
| ಡಬಲರೋಲರ | | ೨೦೫-೨೧೫ |

ಬೆಂಗಳೂರು ನಗರ ಸಭೆಯ ಅಧ್ಯಕ್ಷರಾಗಿದ್ದ ಶ್ರೀ ಎಚ್ ಸಿ ಸೂರ್ಯನಾರಾಯಣರಾಯರ ರಾಜೀನಾಮೆಯಿಂದ ತೆರವಾದ ಅಧ್ಯಕ್ಷ ಸ್ಥಾನಕ್ಕೆ ಹೊಸ ಅಧ್ಯಕ್ಷರನ್ನಾರಿಸಲು ಸೇರಿದ ತಾ ೨೦ ರ ಅಧಿವೇಶನದಲ್ಲಿ ಶ್ರೀ ಪಿ ಶಿವಶಂಕರರು ಅಧ್ಯಕ್ಷ ಸ್ಥಾನಕ್ಕೆ ಅವಿರೋಧವಾಗಿ ಆರಿಸಿ ಬಂದರು. ಅವರ ಪ್ರತಿಸ್ಪರ್ಧಿ ಶ್ರೀ ಎಂ ಎಲ್ ರಾಜು ಅವರು ಹಿಂತೆಗೆದುಕೊಂಡರು. ಸಭೆ ಜರಗುವ ಮೊದಲು ಉಪಾಧ್ಯಕ್ಷರಾದ ಶ್ರೀ ರಾಮಚಂದ್ರ ಗುಪ್ತರೂ ರಾಜೀನಾಮೆಯಿತ್ತರು. ಕಾಂಗ್ರೆಸ್ ಸದಸ್ಯರು ಅಧ್ಯಕ್ಷರ ಆಯ್ಕೆಯ ಕಾಲಕ್ಕೆ ಸಭಾತ್ಯಾಗ ಮಾಡಿದ್ದರು.

"ಹತ್ತು ಸಾವಿರ ಶುಭೇಚ್ಛೆಗಳನ್ನು ಕೊಡಲೊಪ್ಪುತ್ತೇನೆ." ಎಂದು ಮೈಸೂರು ಮಹಾರಾಜರ ಚಿತ್ರದೊಡನೆ ಮುದ್ರಿಸಲ್ಪಟ್ಟ ನೋಟುಗಳಂಥ ಕಾಗದಗಳಿಗೆ ಮೈಸೂರು ಸರಕಾರದವರು ಮುಟ್ಟುಗೋಲು ಹಾಕಿದ್ದಾರೆ.

# ಬೆಂಗಳೂರು-ಮೈಸೂರು

ತಾ ೧೮ ಕ್ಕೆ ಸೇರಿದ ಮೈಸೂರ ನಗರ ಸಭೆಯ ಅಧಿವೇಶನದಲ್ಲಿ ಮುಂದಿನ ವರ್ಷಕ್ಕೆ ೧೭,೭೯,೨೯೯ ರೂಪಾಯಿ ಆಯ ಮತ್ತು ೧೪,೯೨,೪೯೫, ರೂ, ವೆಚ್ಚ ಅಂದಾಜು ಸ್ವೀಕೃತವಾಯಿತು. ನೀರು ಮತ್ತು ಮನೆತೆರಿಗೆ ಇಳಿಸಿ ಮೈಸೂರಿಗೆ ಬರುವ ಸುಖಾಪೇಕ್ಷಿಗಳ ಮೇಲೂ ವ್ಯಾಪಾರಿಗಳ ಮೇಲೂ ತೆರಿಗೆ ಹಾಕಬೇಕೆಂದೂ ನಗರದಲ್ಲಿ ಕೈಕೊಳ್ಳುವ ಹೊಸ ಸುಧಾರಣೆಗಳ ಬಗ್ಗೆ ಸರಕಾರದಿಂದಾಗಲಿ ಸಾರ್ವಜನಿಕರಿಂದಾಗಲಿ ಹಣ ಎತ್ತಬೇಕೆಂದೂ ನಿರ್ಣಯವಾಯಿತು.

ಬೆಂಗಳೂರ ದಂಡಿನಲ್ಲಿ ತಾ ೨೦ ರಿಂದ ಬ್ರಿಡ್ಜಿನ ಸೀದಾ ಆರಂಭವಾಗಿದೆ.

ಮೈಸೂರು ಬೆಂಗಳೂರು ನಗರಗಳಿಗೆ ನೀರು ಪೂರೈಸಲು ೧ ಕೋಟಿ ರೂಪಾಯಿ ವೆಚ್ಚ ತಗಲುವ ೧೦ ವರ್ಷದ ಯೋಜನೆಯೊಂದನ್ನು ಮೈಸೂರ ಸರಕಾರ ಸಿದ್ಧಗೊಳಿಸಿದ್ದು ಬೆಂಗಳೂರಿಗಾಗಿ ಚಾಮರಾಜ ಸಾಗರ ಒಡ್ಡನ್ನು ೧೦ ಅಡಿ ಎತ್ತರಿಸಿ ಮತ್ತು ಶಿಂಸಾ ಹತ್ತಿರ ಕಾವೇರಿ ನದಿಯಿಂದ ಪಂಪು ಮಾಡಿ ನಳ್ಳಿಗಳಲ್ಲಿ ನೀರು ತರಬೇಕೆಂದು ಯೋಜಿಸಲಾಗಿದೆ.

ಚಿಟಗಾಂಗದಿಂದ ಮೈಸೂರಿಗಾಗಿ ೭೯೦೨ ಟನ್ ಅಕ್ಕಿ ತುಂಬಿದ ಹಡಗೊಂದು ಮದ್ರಾಸಿಗೆ ಹೊರಟಿದ್ದು ಮದ್ರಾಸಿನಿಂದ ಆ ಅಕ್ಕಿಯನ್ನು ರೇಲ್ವೆ ಮೂಲಕ ಮೈಸೂರಿಗೆ ಕಳಿಸಲಾಗುವದೆಂದು ತಿಳಿಯುತ್ತದೆ. ಬಲೂಚಿಸ್ತಾನದಿಂದ ಜೋಳ ಬರಲಿದೆ.

ಮದ್ರಾಸಿನ ಹಿಂದಿನ ಅಡ್ವೋಕೇಟ ಜನರಲ್ಲರಾದ ಸರ್ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರರು ಬ್ರಿಟಿಶ ಮಂತ್ರಿ ರಾಯಭಾರದ ಯೋಜನೆಯನ್ನು ಮುತ್ಸದ್ದಿತನದ್ದೆಂದು ಪ್ರಶಂಸಿಸಿದ್ದಲ್ಲದೆ ಸಂಸ್ಥಾನಗಳು ತಮ್ಮ ರಾಜ್ಯ ಘಟನೆಯನ್ನು ಬದಲಿಸಿ ಪ್ರಜಾಸತ್ತಾತ್ಮಕ ಸ್ವರೂಪ ತಳೆದು ಯೂನಿಯನ್ನಿನಲ್ಲಿ ಸೇರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.

ಸಿಂಧದಿಂದ ಮೈಸೂರಿಗೆ ೧೪೦೦ ಟನ್ ಕಡಲೆ ಬರುವದೆಂದು ಅಧಿಕೃತ ಪ್ರಕಟನೆ ಸಾರುತ್ತದೆ.

೪॥ ಕೋಟಿ ರೂ. ವೆಚ್ಚದ ರಸ್ತೆ ಅಭಿವೃದ್ಧಿಯ ೫ ವರ್ಷದ ಯೋಜನೆಯೊಂದನ್ನು ಮೈಸೂರು ಸರಕಾರ ಮಂಜೂರು ಮಾಡಿದೆ.

ಮೈಸೂರು ಸಂಸ್ಥಾನ ಕಾಂಗ್ರೆಸ್ ಕಾರ್ಯಕಾರಿ ಮಂಡಲದ ತಾ ೧೯ ರ ಸಭೆಯಲ್ಲಿ, ಬ್ರಿಟಿಶ ರಾಯಭಾರದ ಸೂಚನೆಗಳು ಸಂಸ್ಥಾನಗಳ ಪ್ರಜಾಭಿಪ್ರಾಯವನ್ನು ದುರ್ಲಕ್ಷಿಸಿವೆಯೆಂದು ಖಂಡಿಸಿ ಸಂಸ್ಥಾನಗಳಿಂದ ಹೋಗುವ ೯೩ ಪ್ರತಿನಿಧಿಗಳು ಲೋಕನಿಯುಕ್ತರಾಗಿರಬೇಕೆಂದು ಬೇಡಲಾಯಿತು.

ಮೈಸೂರು ಕಾಂಗ್ರೆಸ್ಸಿನ ಏಳನೆ ಮಹಾಧಿವೇಶನಕ್ಕೆ ಅಧ್ಯಕ್ಷ ಚುನಾವಣೆ ತಾ ೧೬—೬-೪೬ ಕ್ಕೆ ಜರಗುವದೆಂದು ಅಧಿಕೃತವಾಗಿ ಪ್ರಕಟಿಸಲಾಗಿದೆ. ಹೆಸರು ಸೂಚಿಸುವ ಕೊನೆಯ ತಾರೀಕು ೩೧-೫-೪೬ ಚುನಾವಣೆಯ ಫಲಿತಾಂಶ ತಾ॥ ೨೦-೬-೪೬ ಕ್ಕೆ ಹೊರಬೀಳುವದು.

ದಿಲ್ಲಿಯ "ಡಾನ್" ಪತ್ರಿಕೆಯಲ್ಲಿ ಮೈಸೂರು ಮುಸ್ಲಿಂ ಸಂಸ್ಥಾನವೆಂದು ಪ್ರಸಿದ್ಧವಾದ ಸುದ್ದಿಯ ಸಂಬಂಧದಲ್ಲಿ ಬೆಂಗಳೂರಿನ "ಡೇಲಿನ್ಯೂಸ್." ಪತ್ರಿಕೆಯಲ್ಲಿ ಪ್ರಕಟವಾದ ಪತ್ರವೊಂದರ ಸಂಬಂಧದಲ್ಲಿ ಸಂಸ್ಥಾನ ಮುಸ್ಲಿಂಲೀಗ್ ಕಾರ್ಯದರ್ಶಿ ಶ್ರೀ ಎ. ಜೆ. ಖಲೀಲರು ಆ ಪತ್ರಿಕೆಯ ಮೇಲೆ ಮಾನನಷ್ಟ ಪ್ರಕರಣ ಹೂಡಿದ್ದಾರೆ.

## ಇರಾಣದಲ್ಲಿ ಅಂತರ್ಯುದ್ಧ

ತೆಹರಾಣದಲ್ಲಿರುವ ಕೇಂದ್ರ ಸರಕಾರಕ್ಕೂ ಅಝುರಬೈಜಾನ ಮುಖ್ಯ ಮಂತ್ರಿ ಪಿಶೆವಾರಿಗೂ ನಡೆದ ಮಾತುಕತೆ ವ್ಯರ್ಥವಾದ ನಂತರ ಅಝುರಬೈಜಾನ, ಕುರ್ಡಿಸ್ತಾನ ಗಡಿಯಲ್ಲಿ ಇರಾಣಿ ಸೈನ್ಯ ಅಝುರಬೈಜಾನದ ಮೇಲೇರಿ ಹೋಗಿದೆ. ಅಝುರಬೈಜಾನ ರಾಷ್ಟ್ರೀಯ ಸೈನ್ಯ ಅದನ್ನೆದುರಿಸಿದೆ. ಹೀಗೆ ಏರಿಹೋಗಲು ತಾನು ಅಪ್ಪಣೆ ಕೊಟ್ಟಿಲ್ಲವೆಂದು ಇರಾಣ ಮುಖ್ಯ ಮಂತ್ರಿಯ ಹೇಳಿಕೆ. ಯುದ್ಧ ನಿಲ್ಲಿಸಲು ಅವನು ಅಜ್ಞೆ ಕೊಟ್ಟಿದ್ದಾನೆ. ಆದರೆ ಲಂಚಗುಳಿ ಸೇನಾ ನಾಯಕರು ಈ ಹೋರಾಟವನ್ನು ಇನ್ನೂ ಸಾಗಿಸಿದ್ದಾರೆಂದು ತಿಳಿಯುತ್ತದೆ.

Civil Supplies Department,
Bombay Castle, 8th May 1946.

No. 564/VII :- In pursuance of the provisions of clause 24 of the Bombay Cotton Cloth Trade Regulation Order 1945, The Government of Bombay is pleased to authorise the following Officers namely-

1. The Assistant Supply Officer (cloth)
2. The Textile Supervisor,
3. Taluka Supply Assistants,
4. All Revenue Officers of and above the grade of Mahalkari,
5. The Sub-Divisional Magistrate, Dharwar town,
6. Rationing Officers, Chief Rationing Inspectors, Deputy Chief Rationing Inspectors and Rationing Inspectors in the rationed towns of Hubli and Gadag,

for the purposes of the said clause 24 in the Dharwar district.

2. With reference to sub-rule (1) of Rule 119 of the Defence of India Rules, this Order shall be published in the Bombay Government Gazette and in the following newspapers having circulation in Dharwar District:

1. Samyukta Karnatak, Hubli.
2. Karnatak Bandhu, Gadag.
3. Karmaveer, Hubli.

3. Copies of the Notification shall be affixed to notice boards in revenue offices and supplied to cloth merchants' Associations in Dharwar district. It shall also be announced by the beat of drums that copies of the Order have been so affixed to notice boards.

By order of the Governor of Bombay.

Sd/..............................

Joint Secretary to Government




# ಮತ್ತೆ ಮರಳಲಿಲ್ಲ!

ಕತೆಗಾರ— ಶ್ರೀ. ಸೇವ ನಮಿರಾಜ ಮಲ್ಲ

ಉಗಿಬಂಡಿಯು 'ಗಡ್‌ಗಡ್' ಎನ್ನುತ್ತ ಸಾಗುತಿತ್ತು ಒಂದೇಸವನೆ.

ರಾಮಪ್ಪನು ವೆಲ್ಲೂರು ಸೆರೆಮನೆಯಿಂದ 'ಪೆರೋಲ್' ಮೇಲೆ ಮರಳುತಿದ್ದ. ದೀರ್ಘ ಕಾಲದ ಸೆರೆಮನೆಯ ವಾಸದಿಂದ ಮೊದಲೇ ಕೃಶವಾಗಿದ್ದ ಅವನ ದೇಹಕ್ಕೆ, ಎರಡು ದಿನಗಳ ಈಗಿನ ಉಗಿಬಂಡಿಯ ಪ್ರಯಾಣವು ಇನ್ನೂ ಕ್ಷೀಣತೆಯನ್ನೇ ತಂದೊಡ್ಡಿತ್ತು. ಅದಲ್ಲದೆ ಶ್ರಮಪರಿಹಾರದ ಬಗ್ಗೆ ಒಂದೆಡೆ ಇಷ್ಟು ಸ್ವಸ್ಥವಾಗಿ ಕುಳಿತುಕೊಳ್ಳಲೂ ಅವನಿಗೆ ಎಡೆಯಿರಲಿಲ್ಲ- ಜನಸಂದಣಿಯ ಒತ್ತಡದಿಂದಾಗಿ.

ಈ ಸನ್ನಿವೇಶದಲ್ಲಿ ಒಮ್ಮೊಮ್ಮೆ ಅವನ ಮನಸ್ಸಿನಲ್ಲಿ ಉಗಿಬಂಡಿಯ ಒಂದು ತುದಿಯಿಂದ ಇನ್ನೊಂದು ತುದಿಯ ವರೆಗಿನ ಗಾಡಿಗಳ ಪರಿಸ್ಥಿತಿಯು ಭಾಸವಾಗುತಿತ್ತು. ಫಸ್ಟ್‌ಕ್ಲಾಸ, ಸೆಕೆಂಡ್‌ಕ್ಲಾಸ್! ಅಲ್ಲಿ ಪ್ರಯಾಣಿಕರಿಗೆ ಎಲ್ಲ ರೀತಿಯ ಅನುಕೂಲತೆಗಳು! ಥರ್ಡ್‌ಕ್ಲಾಸ್! ಅಬ್ಬಬ್ಬಾ ಅದೊಂದು ಬಡವರ ದೊಡ್ಡಿಯೆಂದೇ ಹೇಳಬಹುದು-ಅದರ ವ್ಯವಹಾರಗಳೆಲ್ಲ ಸಾಮಾನ್ಯ ದನಕರುಗಳ ದೊಡ್ಡಿಗಳ ಯಥಾಪ್ರತಿ! — ಮತ್ತೆ ಆಚೆತುದಿಯಲ್ಲಿ ಆವಿ ಕಾರುವ ಬಾಯ್ಲರ್! 'ಗುಜುಗುಜು' ಎಂದು ನೀರು ಅದರೊಳಗೆ ಕುದಿಯುತಿತ್ತು!

ಹೀಗೆ ಒಂದೇ ಬಂಡಿಯಲ್ಲಿ ಹಲವಾರು ವೈವಿಧ್ಯಗಳು! — ಉತ್ತಮದಿಂದ ಕನಿಷ್ಠದ ವರೆಗೆ; ತಣ್ಣೀರಿನಿಂದ ಕುದಿಯುವ ನೀರಿನ ವರೆಗೆ.

ಅದರೂ ಇವೆಲ್ಲವೂ ಮನುಷ್ಯರಿಗಾಗಿಯೇ ಏರ್ಪಟ್ಟಿದ್ದುವು!

....ಒಟ್ಟಾಗಿ ಮನುಷ್ಯಸಮಾಜದ ಭೇದನೀತಿಯನ್ನು ಸೂಕ್ಷ್ಮವಾಗಿ ಚಿತ್ರಿಸಿದಂತಿತ್ತು ಆ ಉಗಿಬಂಡಿಯ ವ್ಯವಹಾರದ ನಿಯಮ....

ಮತ್ತೆ ರಾಮಪ್ಪನ ದೃಷ್ಟಿ ಹೊರಗೆ ಸರಿದುದು. ಆಗ ಸಂಜೆಯಾಗುತ್ತಲಿತ್ತು. ಲೋಹಮಾರ್ಗದ ಇಕ್ಕಡೆಯಲ್ಲಿಯೂ ಸೃಷ್ಟಿದೇವಿಯು ನಲಿಯುತಿದ್ದಳು. ದೂರ ದಿಗಂತದಲ್ಲಿ, ಮುಳುಗುತಿದ್ದ ಸೂರ್ಯನ ರಕ್ತರಂಜಿತ ಕಿರಣಗಳು ಸಮುದ್ರದ ನೀರಲ್ಲೆಲ್ಲ ಬೆರೆತುಕೊಂಡು ಹೊಳೆಯುತಿದ್ದುವು. ಅದರೀಚೆ ಶುಭ್ರವಾಗಿ ಕಾಣುತಿದ್ದ ಬಿಳಿಯ ಮಳಲರಾಶಿ. ಅದಕ್ಕೂ ಈಚೆ ಹಸುರು ಬಣ್ಣದಿಂದ ಶೋಭಿಸುತಿದ್ದ ಸಸ್ಯಪ್ರಕೃತಿ.

— ಈ ಮೂರು ಬಣ್ಣಗಳ ನೈಸರ್ಗಿಕ ಜೋಡಣೆಯು ರಾಮಪ್ಪನಿಗೆ ರಾಷ್ಟ್ರಧ್ವಜದ ನೆನಪನ್ನುಂಟು ಮಾಡಿತು. ಆಗ ತ್ರಿವರ್ಣ ಪತಾಕೆಯು ಎಲ್ಲೆಲ್ಲೂ ಬಹಿಷ್ಕರಿಸಲ್ಪಟ್ಟಿತ್ತು. ಅದನ್ನು ಹಿಡಿದ ಅನೇಕರು ಜೈಲುಪಾಲಾಗಿದ್ದರು! ....ಆದರೆ ಈಗ! ಈ ನೈಸರ್ಗಿಕ ತ್ರಿವರ್ಣವನ್ನು ಯಾವ ಅತ್ಯಾಚಾರಿಗಳಿಂದಲೂ ಭೇದಿಸಲು ಸಾಧ್ಯವಾಗಿರಲಿಲ್ಲ! ಅದಿನ್ನೂ ತಲೆಯೆತ್ತಿ ನಿಂತಿತ್ತು!

....ದೇಶದ ಜನರು ದಾಸ್ಯಶೃಂಖಲೆಯಿಂದ ಬಂಧಿಸಲ್ಪಟ್ಟಿದ್ದರೂ, ಪ್ರಕೃತಿಮಾತೆಯು ಇನ್ನು ಸ್ವತಂತ್ರಳಾಗಿಯೇ ಇದ್ದಳು! ....

"ಜಯ ಭಾರತ ಮಾತಾ! ನಿನ್ನ ಬಂಧನದಲ್ಲೂ ನೀನು ಚೆಲುವೆಯಿರುವಿಯಲ್ಲ!" ಎಂದು ರಾಮಪ್ಪ ಉಸುರ್ಗರೆದ.

"ಆ ಚೆಲುವೇ ನನ್ನನ್ನು ಬಂಧನದಲ್ಲಿಟ್ಟಿತು ನಾನು ಸಹರಾ ಮರುಭೂಮಿಯಾಗಿರುತಿದ್ದರೆ!...." ಎನ್ನುವ ಉತ್ತರ ಬಂದಂತೆ ಮರುಕ್ಷಣದಲ್ಲೇ ಅವನಿಗೆ ಭಾಸವಾಯಿತು.

"ಸುಜಲಾಂ ಸುಫಲಾಂ...." ಸ್ಫೂರ್ತಿಗೊಂಡು ಮತ್ತೆ ಹಾಡತೊಡಗಿದ.

ಆ ಶಬ್ದಗಳೆಷ್ಟು ನಿಜ! ಎಷ್ಟು ಮಧುರ!

ಸೂರ್ಯನು ಮುಳುಗಿದೊಡನೆ ರಾಮಪ್ಪನಿಗೆ ಮತ್ತೆ ಮನಸ್ಸಿಲ್ಲದಿದ್ದರೂ ಒಳಗೆ ದೃಷ್ಟಿಹಾಕಬೇಕಾಗಿ ಬಂತು. ಅವನು ಕುಳಿತಿದ್ದ ಇದಿರಿನಲ್ಲಿ ಇಬ್ಬರು ತರುಣ ದಂಪತಿಗಳು ಕುಳಿತುಕೊಂಡು ಮಾತನಾಡುತಿದ್ದರು, ನಗುತಿದ್ದರು. ಅವರ ಈ ಬಹಿರಂಗ ವರ್ತನೆಯು ಅಂತರಂಗದ ಮಮತೆಯ ಪಡಿಯಚ್ಚಾಗಿತ್ತು. ಅವರಿಬ್ಬರೂ ಇಂಗ್ಲಿಷ ಬೆರೆತ ಕನ್ನಡದಲ್ಲಿ ಮಾತನಾಡುತ್ತಿದ್ದರು. ಮಾತುಗಳ ಹಿನ್ನೆಲೆಯು ಹೊಸದಾಗಿ ಸಿಕ್ಕಿದ ನೌಕರಿಯ ಕುರಿತಾಗಿತ್ತು. ಅದರೆಡೆಯಲ್ಲಿ ದೇಶದ ರಾಜಕೀಯ ಪರಿಸ್ಥಿತಿ ಮುಂತಾದ ಹಲವಾರು ವಿಷಯಗಳೂ ತಲೆಹಾಕುತಿದ್ದುವು. ಅವರಿಬ್ಬರೂ 'ಸರಕಾರಕ್ಕೆ ತೊಂದರೆ' ಕೊಡುತ್ತಲಿದ್ದ ರಾಷ್ಟ್ರಸಭೆಯನ್ನು ಮುಕ್ತಕಂಠದಿಂದ ಖಂಡಿಸುತಿದ್ದರು. ಬಯ್ಯುತಿದ್ದರು.

.... ಇದನ್ನು ಕೇಳುತ್ತಿದ್ದ ರಾಮಪ್ಪನಿಗೆ ಜುಮ್ಮೆಂದು ಮಿಂಚು ಬಡಿದುಹೋದ ಹಾಗಾಯಿತು....

"ನಿಮ್ಮ ಜನರ ರಕ್ತವನ್ನೇ ಕುಡಿದು ನೀವು ಜೀವಿಸುತಿದ್ದೀರಿ ಎಂಬುದು ನಿಮಗೆ ಗೊತ್ತಿಲ್ಲ" ಎಂದು ತನ್ನೊಳಗೇ ಅಂದುಕೊಂಡ. ಬಾಯಿಬಿಡಲು ಮನಸ್ಸೇಕೋ ಒಪ್ಪಲಿಲ್ಲ.

ಗಂಡಸು ತನ್ನ ಪೆಟ್ಟಿಗೆಯೊಳಗಿದ್ದ ಸರಕಾರದವರು (ಅಪ) ಪ್ರಚಾರಕ್ಕಾಗಿ ಪ್ರಕಟಿಸಿದ, "ಪುಂಡತನ"ದ ಪುಸ್ತಕವನ್ನು ತೆಗೆದು ಬಿಡಿಸಿ ಅದರೊಳಗಿದ್ದ ಮುಖ್ಯಾಂಶಗಳನ್ನು ಓದಿ ಹೇಳುತಿದ್ದನು; "ಪುಂಡರ" ಕಾರ್ಯಕಲಾಪಗಳ ಚಿತ್ರಗಳನ್ನು ತೋರಿಸುತ್ತಲಿದ್ದನು!

....ಯಥಾರ್ಥವಾಗಿ ನೋಡಿದರೆ ಅದು ದೇಶದ ಸ್ವಾತಂತ್ರ್ಯವೀರರ ಮೇಲೆ ಪುಂಡಾಟಿಕೆ ನಡೆಸಿದುದರ ಪ್ರತಿಧ್ವನಿಯ ಚಿತ್ರಣವಾಗಿತ್ತು. ಅಷ್ಟೆ....

ರಾಮಪ್ಪನಿಗೆ ಮತ್ತೆ ಅವರ ಕಡೆ ನೋಡಲಾಗಲಿಲ್ಲ. ಆದರೆ ಆ ದಂಪತಿಗಳ ಪರಸ್ಪರ ನಲ್ಮೆಯು ಅವನ ದಾಂಪತ್ಯ ಜೀವನದ ನೆನಪನ್ನುಂಟುಮಾಡದಿರಲಿಲ್ಲ. ಹದಿನೈದು ದಿನಗಳ ಮುಂಚೆ, ಅವನ ಹೆಂಡತಿ ಲೀಲಾ ಮರಣೋನ್ಮುಖಳಾಗಿರುವಳೆಂದೂ, ಅದಕ್ಕೋಸುಗ ಅವನ ತಾತ್ಕಾಲಿಕ ಬಿಡುಗಡೆಗೆ ಅಧಿಕಾರಿಗಳಿಗೆ ಮನವಿ ಮಾಡಿಕೊಂಡಿರುವರೆಂದೂ ಅವನಿಗೆ ಮನೆಯಿಂದ ಕಾಗದ ಬಂದಿತ್ತು. ಏನೋ ಅಧಿಕಾರಿಗಳು ತುಸು ಕೃಪೆ ಮಾಡಿ ಹದಿನೈದು ದಿನದ ನಂತರವಾದರೂ ಅವನನ್ನು ಬಿಟ್ಟುಬಿಟ್ಟಿದ್ದರು.

ಈ ದಂಪತಿಗಳ ವರ್ತನೆಯು, ಅವನ ಅತ್ತಿತ್ತ ಸರಿದು ಹೋಗಿದ್ದ ಸಾಂಸಾರಿಕ ಜೀವನದ ನೆನಪಿನ ಹಾಳೆಗಳನ್ನು ತಿರುವತೊಡಗಿತು. ಪ್ರಥಮ ಪ್ರೇಮ, ವಿವಾಹಾನಂತರದ ಪ್ರೇಮಪೂರಿತ ದಿನಗಳು, ದೇಶದ ಕರೆಗೆ 'ಓ' ಗೊಟ್ಟು ಅವನು ಮುಂದರಿದುದು, ಆಗ ಲೀಲಳಿಗಾದ ಮನೋವೇದನೆ, ಅವಳ ಸಂತಾಪಯುಕ್ತ ಮಾತುಗಳು....ಇವೆಲ್ಲ ದೃಶ್ಯಗಳು ಅವನ ಮನಸ್ಸಿನಲ್ಲಿ ಮೂಡಿ ಮಾಯವಾಗತೊಡಗಿದವು. ಇದರಿಂದಾಗಿ ತನ್ನೂರನ್ನು ಸೇರುವ ಹಂಬಲ ಅವನಲ್ಲಿ ಕಡಲಿನಂತೆ ಉಬ್ಬಿ ಹರಿಯಿತು.

....ಬಾಳಿನ ನೂತನ ಬಳ್ಳಿಯನ್ನೇ ದೇಶಸೇವೆಗಾಗಿ ಬಲಿದಾನವೀಯಲು ತನಗೆ ನೆರವಾದ ತನ್ನ ಹೆಂಡತಿಯನ್ನು ಅವನಿಗೆ ಮತ್ತೆ ಮೆಚ್ಚದಿರಲಾಗಲಿಲ್ಲ.

ಉಗಿಬಂಡಿಯು 'ಕೂ! ಕೂ!' ಎಂದು ಸಿಳ್ಳು ಹಾಕುತ್ತ ನಿಲ್ದಾಣ ಸೇರಿತು. ರಾಮಪ್ಪ ಮೆಲ್ಲನೆ ಅದರಿಂದಿಳಿದು ಹೊರಗೆ ಬಂದ. ತಿಂಗಳ ಬೆಳಕು ಆಗ ತಾನೆ ಹಾಲು ಚೆಲ್ಲಿದಂತೆ ಪ್ರಕೃತಿರಾಶಿಯನ್ನು ಪರಿವರ್ತಿಸಿತ್ತು. ಆದರೆ ರಾಮಪ್ಪನಿಗೆ ಇದಾವುದೂ ಮಾನಸಿಕ ಏರಿಳಿತಗಳಿಂದಾಗಿ ಗೋಚರಿಸಲೇ ಇಲ್ಲ.

ಅವನ ಊರು ಇನ್ನೂ ಹದಿನೈದು ಮೈಲು ದೂರವಿತ್ತು-ಹದಿನೈದು ಮೈಲುಗಳು! ಅವನ ದೇಹಪ್ರಕೃತಿಯು ಅವನನ್ನು ಒಂದು ಮೈಲು ಕೂಡ ನಡೆಸಲು ಆಗ ಅಸಮರ್ಥವಾಗಿತ್ತು. ಆದರೆ ಅವನ ಮಾನಸಿಕ ಸ್ಫೂರ್ತಿ ಮತ್ತು ಹಂಬಲಗಳು ಈ ದೈಹಿಕ ಅಬಲತೆಯನ್ನು ಅಷ್ಟು ಬಲಿಷ್ಠವಾಗಲು ಬಿಡಲಿಲ್ಲ. ಅಂತೆಯೇ ಧೃಢನಿಶ್ಚಯದಿಂದ ಅವನು ಊರಿನ ದಾರಿ ಹಿಡಿದೇ ಹಿಡಿದನು.

ದಾರಿಯು ಉದ್ದವಿತ್ತು, ರಾಮಪ್ಪ ಒಬ್ಬನೇ ಮುನ್ನಡೆಯುತಿದ್ದನು. ಜನರೆಲ್ಲ ಆಗ ನಿದ್ದೆ ಹೋಗುವ ಸಮಯ. ಪ್ರಕೃತಿಯು ಪ್ರಶಾಂತವಾಗಿತ್ತು. ರಾಮಪ್ಪನಿಗೆ ದಣಿವೂ ತಿಳಿಯಲಿಲ್ಲ; ನಿಶ್ಶಬ್ದ ವಾತಾವರಣವು ಸಹಜವಾಗಿ ಉಂಟುಮಾಡುವ ಹೆದರಿಕೆಯೂ ಆಗಲಿಲ್ಲ. ಆ ಪ್ರಯಾಣವು ನಿಜವಾಗಿಯೂ ಅವನ ಅನಂತ ಆತ್ಮವಿಶ್ವಾಸ ಮತ್ತು ಧೃಢ ನಿಶ್ಚಯವನ್ನು ತಿಕ್ಕಿನೋಡುವ ಒರೆಗಲ್ಲಾಗಿತ್ತು.

ಕಡೆಗೆ ತನ್ನೂರಿನ ಬಳಿ ಸೇರಿದ; ಸಂತೆಕಟ್ಟೆ ಕಳೆಯಿತು. ಊರ ದೇವಸ್ಥಾನ ಕಳೆಯಿತು; ಶಾಲೆ ಕಳೆಯಿತು ಈಗ ಅವನ ಮನೆಯ ಇದಿರುಗದೆಗೆ ಬಂದೇಬಿಟ್ಟ! ಮನಸ್ಸಿನಲ್ಲಿ ಉದ್ವೇಗ ಮತ್ತು ಆತುರತೆ ನಲಿಯುತಿದ್ದುವು; ತನ್ನ ಮನದಣಿದ ಇನಿಯಳ ವಿಯೋಗದುಃಖವನ್ನು ಶಾಂತಗೊಳಿಸಲು ಅವನ ಸಹಾನುಭೂತಿಯುಕ್ತ ಹೃದಯವು ಕಾತರಿಸುತಿತ್ತು. -ಮತ್ತೂ ಕೆಲ ಹೆಜ್ಜೆ ಮುಂದೆ....

....ಮುಂದೆ ಬಂದೇಬಿಟ್ಟ. ಅವನ ಮನೆಯಲ್ಲಿ ಗದ್ದಲ ಕೇಳಿಬರುತಿತ್ತು— ಗದ್ದಲವೆಂದರೆ ಅಳುದನಿಗಳ ಸಮ್ಮಿಲನದಿಂದುಂಟಾದ ಶಬ್ದ! ಏನೆಂದು ತಿಳಿಯಲು ಥಕ್ಕನೆ ಅಲ್ಲೇ ನಿಂತು ಅತ್ತಿತ್ತ ನೋಡಿದ.

ಅನತಿ ದೂರದಲ್ಲೇ ದೊಡ್ಡದೊಂದು ಬೆಂಕಿ ಕಾಣಬರುತಿತ್ತು. ಕಿಡಿಗಳು ಮೇಲೆ ಹಾರುತಿದ್ದುವು. 'ಚಟರ್-ಚಟರ್' ಶಬ್ದ ಕೇಳುತಿತ್ತು. ರಾಮಪ್ಪನಿಗೆ ಇದು ಕಾಷ್ಠದ ಬೆಂಕಿಯೆಂದರಿಯಲು ಹೆಚ್ಚು ಸಮಯ ಬೇಕಾಗಿರಲಿಲ್ಲ— ಹಾಗೆ ಗಾಳಿ ಅವನ ಕಡೆ ಬೀಸುತ್ತಲಿತ್ತು. ಯಾರ ಹೆಣ ಉರಿಯುತಿತ್ತೆಂಬುದೂ ಅವನಿಗೆ ಅಲ್ಲಿಂದಲೇ ಗೊತ್ತಾಯಿತು.

ಮರುಕ್ಷಣದಲ್ಲೇ ರಾಮಪ್ಪನಿಗೆ ತಾನು ನೀರಿಲ್ಲದ ಮರುಭೂಮಿಯಲ್ಲಿ ನಿಂತಿರುವೆನೋ ಎಂದು ಭಾಸವಾಯಿತು ....ಬೆಂಕಿಯ ಹೊಗೆ ಸುರುಳಿ ಸುರುಳಿಯಾಗಿ ಆಕಾರವಿಕಾರಗಳಿಂದ ಪವನಮಾರ್ಗದಲ್ಲಿ ತೇಲುತಿತ್ತು.

"ಇನ್ನಾಯಿತು; ನೀವು ಹೋಗಬಹುದು ಇನ್ನೊಮ್ಮೆ ಕಾಣಸಿಗುವ" ಎಂದು ಯಾರೋ ಹೇಳಿದಂತಾಯಿತು ರಾಮಪ್ಪನಿಗೆ. ಹಿಂದೆ ನೋಡಿದ ಯಾರೂ ಇಲ್ಲ....

....ಅವನ ನಿರಾಶ ಹೃದಯವೇ ಹಾಗೆ ಮಾರ್ದನಿಗೊಳ್ಳುತಿತ್ತು....

ತಾನಿದೆಲ್ಲ ಮರೆಯಲು ಯತ್ನಿಸಿ ಬೇರೆ ರೀತಿಯ ಮನುಷ್ಯನಾಗುವೆನೆಂದು ಸಂಕಲ್ಪಿಸುತ್ತ ಮನೆಗೆ ಬೆನ್ನು ಹಾಕಿದ. ಆದರೆ ತನ್ನ ಹೃದಯವನ್ನೇ ತಾನು ಮರೆಯಲು ಹೇಗೆ ಸಾಧ್ಯ?

ನೆನಪಿನ ಚಕ್ರ ಉರುಳುತ್ತಲೇ ಇತ್ತು. ಲೀಲಳೊಡನೆ ಸುಖದಲ್ಲಿ ಕಳೆದ ದಿನಗಳು; ಕಡೆಯ ದಿನ ಅವನನ್ನು ಬೀಳ್ಕೊಡುವಾಗ ಸುರಿದ ಅವಳ ಕಣ್ಣೀರ ಧಾರೆ.... ಮತ್ತೆ ಪುನಃ ಅವಳಲ್ಲಿ ಹೊಳೆದ ಆಶಾವಾದದ ನೋಟಕ್ಕೆ ಆ ಮೇಲಿನ ದುರಂತ!.... ಇಂದಿನ ಪ್ರತ್ಯಕ್ಷ ದೃಶ್ಯ....

ಈಗ ಅವನು ನಿಜವಾದ ಕರ್ಮಯೋಗಿಯಾಗಿದ್ದ. ಲೋಕವು ತಂದುಕೊಡುವ ಸುಖಗಳ ಮೇಲಿದ್ದ ಅವನ ಆಶೆಯ ಪರೆ ಹರಿದು ಸ್ವಾರ್ಥವು ದಹನಗೊಂಡಿತು.

ಹೆಂಡತಿಯ ಮೇಲಿನ ಮಮತೆಯ ಸ್ಥಳವನ್ನು ದೇಶಭಕ್ತಿಯು ಇನ್ನು ಆವರಿಸಿಕೊಂಡಿತು; ಹೀಗೆ ಅವನು ಪ್ರೇಮಬಂಧನದಿಂದ ಭಕ್ತಿಬಂಧನಕ್ಕೊಳಗಾದ.

ಉಳಿದ ಪೆರೋಲ್ ಅವಧಿಯನ್ನು ಸೆರೆಮನೆಯಲ್ಲೇ ಕಳೆದ. ಕೆಲಸಮಯದ ನಂತರ ಬಿಡುಗಡೆಯೂ ಆಯಿತು.

....ಮತ್ತೆ ಮರಳಲಿಲ್ಲ— ಊರ ಕಡೆಗೆ. ಇಡೀ ದೇಶವೇ ತನ್ನ ಊರೆಂಬ ಭಾವನೆ ಅವನಲ್ಲಿ ನೆಲೆಗೊಂಡಿತ್ತಾಗ.

—ಜೀವನದ ಒಂದು ಹೆಗ್ಗುರುತು ಮಾಸಿ, ಇಡೀ ಜೀವನವೇ ಹೆಗ್ಗುರುತಾಗಿ ಪರಿಣಮಿಸಿತು! -ಮತ್ತೆ ಮರಳಲಿಲ್ಲ!




ಜ್ಯೋತಿಷಿ:—ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಮೇ ತಾ. ೨೭ ರಿಂದ ಜೂನ ೨ ರ ವರೆಗೆ

## ಮೇಷ

ಪ್ರಕೃತಿ ನೆಟ್ಟಗೆ. ಆದರೆ ಮನಸ್ಸು ಅಸ್ವಸ್ಥ. ಹೆಂಡತಿಗೆ ಆರೋಗ್ಯ. ಆದರೆ ರತಿ ಸುಖದ ಹೊರತು ಉಳಿದ ವಿಷಯಗಳಲ್ಲಿ ಉಭಯತರಲ್ಲಿ ಮೇಲಿಂದ ಮೇಲೆ ಮತಭೇದವಾಗುವದರಿಂದ ಪ್ರಪಂಚದಲ್ಲಿ ಅವಶ್ಯಕ ಸುಖಸೋಯಿಗಳು ಸಮೃದ್ಧವಾಗಿದ್ದರೂ ಸರ್ವರೂ ಉದಾಸಗೊಳ್ಳುವಿಕೆ. ಉದ್ಯೋಗದಲ್ಲಿ ಪ್ರಗತಿ ದಿನ ದಿನಕ್ಕೆ ಮಂದ. ಪ್ರತಿಷ್ಠೆಗೂ ನಾನಾತರದ ಅಪವಾದ. ಆದರೆ ಲಾಭ ಸಾಧಾರಣ ನೆಟ್ಟಗೆ. ಓರ್ವ ನೆರೆಹೊರೆಯವನು ಇಲ್ಲವೆ ಆಪ್ತನು ಅಸಮ್ಮತ ಕಾರ್ಯ ಮಾಡಿಸಲು ಆಗ್ರಹಪಡುವಿಕೆ. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಉಭಯ ಪಕ್ಷದ ಸಮಾನ ಸ್ಥಿತಿ. ಮಿತ್ರ ಸುಖ ನೆಟ್ಟಗೆ. ಪ್ರವಾಸ ಹಾಗು ಭೆಟ್ಟಿಕಿಂತ ಪತ್ರವ್ಯವಹಾರ ಹೆಚ್ಚು ನೆಟ್ಟಗೆ. ಅಶ್ವಿನಿಯ ಕೊನೆಯ ೩ ಹಾಗು ಭರಣಿಯ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೮, ೨೯, ೧, ೨ ನೆಟ್ಟಗೆ.

## ವೃಷಭ

ಪ್ರಕೃತಿ ಉತ್ತಮ ಪ್ರಾಪಂಚಿಕ ಸುಖ ಸಾಧಾರಣ. ಆದರೆ ಕೆಲವು ಸುಖಕಾರಕ ಸಂಗತಿಗಳು ಘಟಿಸುವದರಿಂದ ಮನಸಿಗ್ಗೆ ಉತ್ಸಾಹ. ಉದ್ಯೋಗದಲ್ಲಿ ಪ್ರಗತಿ ಸಾಮಾನ್ಯ ಆದರೆ ಪ್ರತಿಷ್ಠೆ ಹಾಗು ಲಾಭ ಬಹಳ. ಮಿತ್ರ ಸುಖ ಉತ್ತಮು. ಮಕ್ಕಳಿಂದ ಹೆಚ್ಚಿನ ಸಮಾಧಾನಕರ ಸಂಗತಿಗಳು, ವಾಜ್ಯ ಹಾಗು ಸ್ಪರ್ಧೆಯಲ್ಲಿ ಒಳ್ಳೆ ಅನುಕೂಲತೆ. ಪ್ರವಾಸಕ್ಕಿಂತ ಭೆಟ್ಟಿ ಹಾಗು ಪತ್ರವ್ಯವಹಾರ ಹೆಚ್ಚು ನೆಟ್ಟಗೆ. ಆದರೆ ರೋಹಿಣಿಯ ಕೊನೆಯ ೩ ಹಾಗು ಮೃಗಾದ ೧ ನೇ ಚರಣಕ್ಕೆ ತೊಂದರೆಯಿಂದ ಯಶ. ತಾ. ೨೭, ೩೦, ೩೧, ೧ ನೆಟ್ಟಗೆ.

## ಮಿಥುನ

ಪ್ರಕೃತಿಗೆ ಸಣ್ಣ ದೊಡ್ಡ ಅಸ್ವಾಸ್ಥ್ಯ ಆದರೆ ಸ್ತ್ರೀ ಸುಖ ಉತ್ತಮು. ಉದ್ಯೋಗದಲ್ಲಿ ಪ್ರಗತಿ ಹಾಗು ಪ್ರತಿಷ್ಠೆ ನೆಟ್ಟಗೆ. ಆದರೆ ಲಾಭದ ಮಾನದಿಂದ ವೆಚ್ಚ ಹೆಚ್ಚು. ಮಿತ್ರ ಸುಖ ನೆಟ್ಟಗೆ. ಅನೇಕ ಕೆಲಸಗಳನ್ನು ಒಮ್ಮೆಲೆ ಆರಂಭಿಸುವದರಿಂದ ವೆಚ್ಚದ ಬಗ್ಗೆ ತೊಂದರೆ. ಸ್ಥಾವರದಲ್ಲಿ ಸ್ವಲ್ಪ ಹಾನಿ. ಪ್ರವಾಸ ಹಾಗು ಭೆಟ್ಟಿ ಪತ್ರವ್ಯವಹಾರಕ್ಕಿಂತ ನೆಟ್ಟಗೆ. ಆರ್ದ್ರಾದ ಕೊನೆಯ ೩ ಹಾಗು ಪುನರ್ವಸುವಿನ ೧ ನೇ ಚರಣಕ್ಕೆ ಬಹಳ ತೊಂದರೆ. ತಾ. ೨೭, ೨೮, ೨ ನೆಟ್ಟಗೆ.

## ಕರ್ಕ

ಸ್ವಂತ ಪ್ರಕೃತಿ ನೆಟ್ಟಗೆ ಆದರೆ ಹೆಂಡತಿಗೆ ಅನಾರೋಗ್ಯ. ಮಕ್ಕಳು ಅಲ್ಲದ ಕಾರ್ಯದಲ್ಲಿ ಹೆಚ್ಚು ಹಣ ಬಳಸುವಿಕೆ. ಇತರ ವಿಷಯಗಳಲ್ಲಿ ಸಹ ಪ್ರಾಪಂಚಿಕ ಚಿಂತೆ ಬಹಳ ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ನೆಟ್ಟಗೆ ಆದರೆ ಲಾಭವು ಅಂದಾಜಿಗಿಂತ ಬಹಳ ಕಡಿಮೆ ಯಾದರೂ ವೆಚ್ಚವು ಮಾತ್ರ ಇಮ್ಮಡಿಯಾಗುವ ಪ್ರಸಂಗ ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಪ್ರಗತಿಯ ಚಿಹ್ನಗಳು. ಅಣ್ಣತಮ್ಮಂದಿರಿಂದ ಸುಖ. ಪ್ರವಾಸಾದಿ ಕೆಲಸ ನೆಟ್ಟಗೆ. ಪುಷ್ಯದ ಕೊನೆಯ ೩ ಹಾಗು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೭, ೨೮, ೨೯, ೩೦ ನೆಟ್ಟಗೆ.

## ಸಿಂಹ

ಪ್ರಕೃತಿ ಹಾಗು ಪ್ರಾಪಂಚಿಕ ಸುಖ ಬಹಳ ಉತ್ತಮು. ಆದರೆ ಮನೆಗೆ ಬಂದ ಆಪ್ತರಿಂದ ಬಹಳ ತೊಂದರೆ. ಉದ್ಯೋಗದಲ್ಲಿ ಪ್ರಗತಿ ಕುಂಠಿತವಾದರೂ ಪ್ರತಿಷ್ಠೆ ಹಾಗು ಲಾಭ ನೆಟ್ಟಗೆ. ಕೆಲವೊಂದು ಮುಳುಗು ಪರ್ಜನ ಯೋಗ. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಅಪಯಶ ಲಕ್ಷಣ. ಮಿತ್ರರೊಡನೆ ಕಲಹ, ಪ್ರವಾಸ ತೊಂದರೆಯದು ಆದರೆ ಭೆಟ್ಟಿ ಹಾಗು ಪತ್ರವ್ಯವಹಾರ ನೆಟ್ಟಗೆ. ಮಘಾದ ಕೊನೆಯ ೩ ಹಾಗು ಪೂರ್ವಾದ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೮, ೨೯, ೩೦, ೩೧ ನೆಟ್ಟಗೆ.

## ಕನ್ಯಾ

ಪ್ರಕೃತಿ ಹಾಗು ಪ್ರಾಪಂಚಿಕ ಸುಖ ಬಹಳ ಉತ್ತಮು ಆದರೆ ಮಕ್ಕಳು ಹಾಗು ಅಣ್ಣತಮ್ಮಂದಿರಿಗೆ ಕಿರುಕುಳ ಅಸ್ವಾಸ್ಥ್ಯ. ಉದ್ಯೋಗದಲ್ಲಿ ಒಳ್ಳೆ ಪ್ರಗತಿ ಹಾಗು ತುಂಬಾ ಲಾಭ. ಆದರೆ ಪ್ರತಿಷ್ಠೆ ಒಮ್ಮೊಂದೊಮ್ಮೆ ಕಡಿಮೆಯಾಗುವ ಭೀತಿ. ಸ್ವತಂತ್ರ ಉದ್ಯೋಗದವರಿಗಿಂತ ನೌಕರರಿಗೆ ಈ ಭೀತಿ ಕಡಿಮೆ. ಮಿತ್ರ ಸುಖ ಉತ್ತಮು. ಸ್ಥಾವರದಲ್ಲಿ ಕೆಲವು ಅನುಕೂಲ ಘಟನೆಗಳು. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಒಳ್ಳೆ ಯಶ ಪ್ರವಾಸಾದಿ ಕೆಲಸ ಹಿತಕರ. ಹಸ್ತಾದ ಕೊನೆಯ ೩ ಹಾಗು ಚಿತ್ರಾದ ಮೊದಲನೆ ಚರಣಕ್ಕೆ ತೊಂದರೆಯಿಂದ ಯಶ. ತಾ. ೨೭, ೩೦, ೩೧ ನೆಟ್ಟಗೆ.

## ತುಲಾ

ಪ್ರಕೃತಿ ಉತ್ತಮು ಆದರೆ ಹೆಂಡತಿಯೊಡನೆ ಮೇಲಿಂದ ಮೇಲೆ ವಿರೋಧ ಹಾಗು ಇತರರಿಂದ ನಾನಾ ಪ್ರಕಾರದ ತೊಂದರೆ ಆಗುವದರಿಂದ ಪ್ರಾಪಂಚಿಕ ತೊಂದರೆ ಬಹಳ. ಉದ್ಯೋಗದಲ್ಲಿ ಪ್ರಗತಿ ಹಾಗು ಲಾಭ ನೆಟ್ಟಗೆ ಆದರೆ ಪ್ರತಿಷ್ಠೆ ಕಡಿಮೆ. ಮಿತ್ರರಿಗೆ ಕ್ಲೇಶ, ಭಯಾನಕ ಸ್ವಪ್ನಗಳಿಂದ ಮನಸ್ಸು ಅಸ್ವಸ್ಥ ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಅಪಯಶ. ಪ್ರವಾಸಾದಿ ಕೆಲಸ ಅತ್ಯಂತ ತೊಂದರೆಯದು. ಸ್ವಾತಿಯ ಕೊನೆಯ ೩ ಹಾಗು ವಿಶಾಖಾದ ೧ ನೇ ಚರಣಕ್ಕೆ ಹೆಚ್ಚು ತೊಂದರೆ ೨೭, ೨೮ ೨೯ ೨ ನೆಟ್ಟಗೆ.

## ವೃಶ್ಚಿಕ

ಪ್ರಕೃತಿ ಉತ್ತಮು ಆದರೆ ಸ್ತ್ರೀ ಸುಖದಲ್ಲಿ ವೈರಸ್ಯ ಮಕ್ಕಳ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಹಾಗು ಲಾಭ ಉತ್ತಮು ಆದರೆ ಪ್ರತಿಷ್ಠೆಗೆ ಕುಂದು. ಮಿತ್ರಸುಖ ಉತ್ತಮು. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಅನುಕೂಲತೆ ಪ್ರವಾಸ ಹಾಗು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು. ನೆಟ್ಟಗೆ. ಅನುರಾಧೆಯ ಕೊನೆಯ ೩ ಮತ್ತು ಜೇಷ್ಠಾದ ೧ ನೇ ಚರಣಕ್ಕೆ ತೊಂದರೆ ಕಡಿಮೆ ತಾ. ೨೭ ೩೦ ೩೧ ನೆಟ್ಟಗೆ.

## ಧನು

ಸ್ವಂತ ಪ್ರಕೃತಿ ನೆಟ್ಟಗೆ ಆದರೆ ಹೆಂಡತಿಗೆ ಅನಾರೋಗ್ಯ ಸರ್ವ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅಸಮಾಧಾನಕರ. ಮಕ್ಕಳಿಂದ ಉದ್ವೇಗಕಾರಕ ಕೆಲಸ. ಉದ್ಯೋಗದಲ್ಲಿ ಪ್ರತಿಷ್ಠೆ ಹಾಗು ಪ್ರಗತಿ ಅತಿ ಕಡಿಮೆ. ಆದರೆ ಲಾಭ ನೆಟ್ಟಗೆ. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಉಭಯ ಪಕ್ಷದ ಸಮಾನ ಸ್ಥಿತಿ. ಪ್ರವಾಸ ತೊಂದರೆಯದು. ಭೆಟ್ಟಿ ಹಾಗು ಪತ್ರವ್ಯವಹಾರ ಸಾಧಾರಣ ನೆಟ್ಟಗೆ. ಮೂಲಾದ ಕೊನೆಯ ೩ ಹಾಗು ಪೂರ್ವಾಷಾಢಾದ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ ೨೮ ೨೯ ೧ ನೆಟ್ಟಗೆ.

## ಮಕರ

ಪ್ರಕೃತಿಯಲ್ಲಿ ಸುಧಾರಣೆ ಆದರೆ ಸ್ತ್ರೀ ಸುಖದಲ್ಲಿ ವೈರಸ್ಯ. ಹಾಗು ಪ್ರಾಪಂಚಿಕ ಸರ್ವ ವಿಷಯಗಳಲ್ಲಿ ಹೆಚ್ಚಿನ ಚಿಂತೆ. ಉದ್ಯೋಗದಲ್ಲಿ ಪ್ರಗತಿ ಹಾಗು ಲಾಭ ಉತ್ತಮು ಆದರೆ ಪ್ರತಿಷ್ಠೆ ಸಲುವಾಗಿ ವಶೀಲಿ ಹಚ್ಚಿದ ಲೋಕಾಪವಾದ. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಒಳ್ಳೆ ಯಶ. ಆದರೆ ಶತ್ರುಗಳಿಂದ ಹೆಚ್ಚು ಉಪದ್ರವ. ಮಿತ್ರಸುಖ ನೆಟ್ಟಗೆ. ಪರಸ್ತ್ರೀಯ ಕುಚೇಷ್ಟೆಯ ಆರೋಪ. ಕೆಲವೊಂದು ಸತ್ಕೃತ್ಯದಿಂದ ಪ್ರಸಿದ್ಧಿಗೆ ಬರುವ ಯೋಗ. ಪ್ರವಾಸ ಹಾಗು ಪತ್ರವ್ಯವಹಾರ ಭೆಟ್ಟಿಗಿಂತ ನೆಟ್ಟಗೆ. ಶ್ರವಣಾದ ಕೊನೆಯ ೩ ಹಾಗು ಧನಿಷ್ಠಾದ ೧ ನೇ ಚರಣಕ್ಕೆ ಹೆಚ್ಚು ತೊಂದರೆ ತಾ. ೨೭ ೩೦ ೩೧ ನೆಟ್ಟಗೆ.

## ಕುಂಭ

ಪ್ರಕೃತಿ ನೆಟ್ಟಗೆ. ಪ್ರಾಪಂಚಿಕ ಸುಖ ವ್ಯವಸ್ಥಿತ. ಆದರೆ ಹೆಂಡತಿಯೊಡನೆ ಜಗಳದ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಉತ್ತಮು ಆದರೆ ಪ್ರತಿಷ್ಠೆಗೆ ಕುಂದು ಅವಚಿತ ಲಾಭದ ಹೆಚ್ಚು ಸಂಭವ. ಮಿತ್ರರಲ್ಲಿ ತ್ವೇಷ. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಸ್ವಲ್ಪ ಅನುಕೂಲತೆ. ಪ್ರವಾಸ ಹಾಗು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ನೆಟ್ಟಗೆ. ಶತತಾರಕೆಯ ಕೊನೆಯ ೩ ಹಾಗು ಪೂರ್ವಭಾದ್ರಪದದ ೧ ನೇ ಚರಣಕ್ಕೆ ಹೆಚ್ಚು ತೊಂದರೆ ತಾ. ೨೭ ೨೮ ೨೯ ೨ ನೆಟ್ಟಗೆ.

## ಮೀನ

ಪ್ರಕೃತಿ ಉತ್ತಮು. ಪ್ರಾಪಂಚಿಕ ಸುಖ ಒಟ್ಟಿನಲ್ಲಿ ಶಿಸ್ತುರಹಿತ. ಅಣ್ಣತಮ್ಮಂದಿರಿಗೆ ಕ್ಲೇಶ. ಮಕ್ಕಳಿಂದ ಭೀತಿಜನ್ಯ ಸಾಹಸ ಕೃತ್ಯಗಳು, ಉದ್ಯೋಗದಲ್ಲಿ ಪ್ರಗತಿ ಹಾಗು ಪ್ರತಿಷ್ಠೆ ಉತ್ತಮು ಆದರೆ ಲಾಭ ಕಡಿಮೆ. ಮಿತ್ರಸುಖದಲ್ಲಿ ಕೆಲವೊಂದು ಕಾರಣದಿಂದ ವೈರಸ್ಯ. ವ್ಯಾಜ್ಯ ಹಾಗು ಸ್ಪರ್ಧೆಯಲ್ಲಿ ಒಳ್ಳೆ ಯಶ. ಬಹಳ ದೂರದ ಹಾಗು ತೊಂದರೆಯ ಪ್ರವಾಸ. ಭೆಟ್ಟಿ ಹಾಗು ಪತ್ರವ್ಯವಹಾರ ಉತ್ತಮು. ಉತ್ತರಾಭಾದ್ರಪದದ ಕೊನೆಯ ೩ ಹಾಗು ರೇವತಿಯ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೭ ೨೮ ೨೯ ನೆಟ್ಟಗೆ.

---

ಹಿಂದುಸ್ತಾನ ಸರಕಾರದ ಕಬ್ಬಿಣ ಹಾಗು ಉಕ್ಕಿನ (ಕಿರುಕಳ) ಉದ್ಯೋಗ ವಿಚಾರಣಾ ಮಂಡಲದವರು ತಾ ೧೩ ಕ್ಕೆ ಮೈಸೂರು ಸರಕಾರದ ಪ್ರತಿನಿಧಿಗಳನ್ನು ಕಂಡು ನಟ್, ಬೋಲ್ಟ, ರಿವ್ಹೆಟ್, ಸ್ಕ್ರೂ ಮೊದಲಾದ ಸಣ್ಣ ಕಬ್ಬಿಣದ ಮತ್ತು ಉಕ್ಕಿನ ಸಾಮುಗ್ರಿವಳ ಯುದ್ಧೋತ್ತರ ಅಭಿವೃದ್ಧಿಯನ್ನು ಕುರಿತು ವಿಚಾರವಿನಿಮಯ ಮಾಡಿದರು. ಮಂಡಲದವರು ಭದ್ರಾವತಿಗೂ ಹೋಗುವರು.

## ಕವಿ ಅಂಬಿಕಾತನಯ

(೨ನೇ ಪುಟದಿಂದ)

ಅಂಜದೆ 'ಕಳೆಯಲಿಲ್ಲೆ ಕತ್ತಲಂಥ ಕತ್ತಲವೇ ಜಾರಿ?' ಎಂದು ಮುನ್ನುಗ್ಗುತ್ತಾರೆ. ಇಲ್ಲದಿದ್ದರೆ ಬಾಳಿನಲ್ಲಿ ಸ್ವಾರಸ್ಯವೇನು? 'ಹುಸಿನಗುತ ಬಂದೆವು ನಸುನಗುತ ಬಾಳೋಣ! ತುಸು ನಗುತ ತೆರಳೋಣ' ಎಂದು ಬಾಳಿನೊಡನೆ ಆಟವಾಡುತ್ತಾರೆ.

ಅಂಬಿಕಾತನಯರ ಕವನಗಳು ಪರಭಾಷೆಗಳಲ್ಲೂ ಅನುವಾದ ಹೊಂದಬೇಕು. ನಮ್ಮ ನಾಡಿನ ಕಲಿ ರಾಷ್ಟ್ರಕವಿಯಾಗಬೇಕು. ನಮ್ಮ ಕವಿಯೆಂದು ನಮ್ಮ ನಾಡಿನೊಳಗೇ ಅಡಗಿಸಿಟ್ಟರೆ ಅದು ಸ್ವಾರ್ಥ ಪೂಜೆಯಾದೀತು!

ಇನ್ನು ಹತ್ತು ವರುಷಕ್ಕೆ ಅಂಬಿಕಾತನಯರ ಅರುವತ್ತನೆಯ 'ರನ್ನಮಹೋತ್ಸವ'. ಆ ಹೊತ್ತಿಗೆ ಅಂಬಿಕಾತನಯರ ಅರುವತ್ತು ಕೃತಿರತ್ನಗಳು ಕನ್ನಡ ಸರಸತಿಯ ಸಿರಿಮುಡಿಯನ್ನಲಂಕರಿಸಲಿ. ಈ ಕನ್ನಡ ಕವೀಂದ್ರರು ಕರ್ನಾಟಕ ರವೀಂದ್ರರಾಗಿ ಭಾರತವನ್ನೆ ಬೆಳಗಲಿ. ಆ ಭಾರತ ಹುಣ್ಣಿವೆ ಲೋಕದ ಕಣ್ಣೆವೆಗಳನ್ನು ತೆರೆಯಲಿ; ಬೆಳಕು ಕೊಡಲಿ.





ಈ ಪತ್ರಿಗಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು.